# ಅಚಲ

19

ಬಿಡಿಪ್ರತಿ : 4 ರೂ. | ತಿಂಗಳ ಪತ್ರಿಕೆ | ನವೆಂಬರ್ - 2006

## ಒಳಗೇನಿದೆ







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,

ಬೆಂಗಳೂರು

# ಅಚಲ

ಸಂಪುಟ - 21 ಸಂಚಿಕೆ : 11

*ಸಂಪಾದಕ ಮಂಡಳಿ*

ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾ ನಾಗರಾಜ್
ಹೆಚ್. ಎನ್. ಗೀತಾ
ಹೇಮಲತಾ ಮಹಿಷಿ

*ಪ್ರಕಾಶಕರು*

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು.
ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.
ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.

Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

**Printed at**
Lipi Mudrana
**Bangalore - 560 004**


2006ರ ಅಕ್ಟೋಬರ್ 27ರಂದು ದಕ್ಷಿಣ ಕೊರಿಯಾದ ಗ್ವಾಂಜುವಿನಲ್ಲಿ 2ನೆಯ ಏಷಿಯಾ ಲಿಟರೇಚರ್ ಫೋರಂನ ಸಮಾವೇಶವನ್ನು ಗ್ವಾಂಜು ರೈಟರ್ಸ್ ಅಸೋಸಿಯೇಷನ್ ಫಾರ್ ನ್ಯಾಷನಲ್ ಲಿಟರೇಚರ್ ಸಂಸ್ಥೆಯು ಏರ್ಪಡಿಸಿತ್ತು. "Literature in times of terror" ಎಂಬ ಕೇಂದ್ರ ವಸ್ತುವನ್ನಾಧರಿಸಿದ ಈ ಸಮಾವೇಶದ ಆಶಯ ಭಾಷಣವನ್ನು ಮಾಡಲು ಕನ್ನಡದ ಖ್ಯಾತ ಲೇಖಕಿ ಹಾಗೂ ಅಚಲ ಬಳಗದ ಸದಸ್ಯೆ ನೇಮಿಚಂದ್ರರವರು ಆಹ್ವಾನಿತರಾಗಿದ್ದರು. ಈ ಅಂತರರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮತ್ತು ಸೃಜನಶೀಲ ಕೃತಿಗಳಲ್ಲಿ ಯುದ್ಧ ವಿರೋಧಿ ನಿಲುವು ಮತ್ತು ಶಾಂತಿಯ ಅಪೇಕ್ಷೆ ಅಭಿವ್ಯಕ್ತಿಗೊಂಡ ಬಗೆಯನ್ನು ಸಾಧಾರವಾಗಿ ಮಂಡಿಸಿದ್ದಾರೆ. ಅವರಿಗೆ ನಮ್ಮ ಅಭಿನಂದನೆಗಳು


ಅಚಲ ವಿಳಾಸ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

ಸಂಪಾದಕೀಯ

# ಸುವರ್ಣ ಕರ್ನಾಟಕದ ಸಂಭ್ರಮದಲ್ಲಿ 'ಮಹಿಳೆ' ಎಲ್ಲಿದ್ದಾಳೆ ?

ಕರ್ನಾಟಕದ ಸುವರ್ಣೋತ್ಸವವನ್ನು ಕಲಾಉತ್ಸವ, ಹಾಡು, ಕುಣಿತ, ಗೋಪುರ ನಿರ್ಮಾಣ ಮುಂತಾದವುಗಳ ಮೂಲಕ ಅದ್ದೂರಿಯಾಗಿ ಮಾಡಿ ರಾಜ್ಯದ ಖಜಾನೆಯನ್ನು ಬರಿದು ಮಾಡುತ್ತಿರುವ ರಾಜ್ಯದ ಸಂಮಿಶ್ರ ಸರ್ಕಾರದ ಮುಂದೆ ರಾಜ್ಯದ ಮಹಿಳಾ ಸಮುದಾಯ ಕೆಲವೊಂದು ಪ್ರಶ್ನೆಗಳನ್ನು ಕೇಳಲೇಬೇಕಿದೆ. ಹಿಂದೆಂದಿಗಿಂತಲೂ ಇತ್ತೀಚಿನ ದಿನಗಳಲ್ಲಿ ಮಹಿಳೆಯರಿಗೆ ಸಂಬಂಧಪಟ್ಟ ಹಿಂಸೆ, ಅಪರಾಧಗಳ ಸಂಖ್ಯೆ ಹೆಚ್ಚುತ್ತಿದೆ. ಆದರೆ ಅವುಗಳ ವಿಷಯದಲ್ಲಿ ಸರಕಾರ ಸಂಪೂರ್ಣವಾಗಿ ಕಿವುಡಾಗಿದೆ. ಮಹಿಳೆಯರ ದನಿಗೆ ಬಾಯಾಗಬಲ್ಲ ಪ್ರತಿನಿಧಿಗಳೇ ಶಾಸನ ಸಭೆಯಲ್ಲಿ ಇಲ್ಲ. ಸುವರ್ಣ ಕರ್ನಾಟಕದ ಐತಿಹಾಸಿಕ ವರ್ಷದಲ್ಲಿ ಸರಕಾರದಲ್ಲಿ ಮಹಿಳಾ ಮಂತ್ರಿಯೊಬ್ಬರು ಇಲ್ಲವೆಂಬುದು ನಾಚಿಕೆಗೇಡು. ಅದರ ಜೊತೆಗೆ ಮಹಿಳಾ ಆಯೋಗವನ್ನು ರಚಿಸದೆ ಬೇಜವಾಬ್ದಾರಿತನ ಪ್ರದರ್ಶಿಸುತ್ತಿರುವ ಸರಕಾರದ ನಿಲುವು ಮತ್ತು ಕಾರ್ಯತಂತ್ರ ಆತಂಕಕಾರಿಯಾದದ್ದು.

ಇತ್ತೀಚಿನ ದಿನಗಳಲ್ಲಿ ದುಡಿಯುವ ಮಹಿಳೆಯರ ಮೇಲಿನ ದೌರ್ಜನ್ಯಗಳು ಹೆಚ್ಚುತ್ತಿವೆ. ಮಹಿಳೆ ಮನೆಯೊಳಗಿರಲಿ, ಮನೆಯ ಹೊರಗಿರಲಿ, ಅವಳ ಮೇಲೆ ಅತ್ಯಾಚಾರವೆಸಗುವ, ಆ್ಯಸಿಡ್ ಸುರಿಯುವ, ಅವಮಾನಿಸುವ ಪ್ರಸಂಗಗಳು ಪ್ರತಿನಿತ್ಯ ನಡೆಯುತ್ತಿರುವುದನ್ನು ಪತ್ರಿಕೆಗಳಲ್ಲಿ ಕಾಣುತ್ತಲೇ ಇದ್ದೇವೆ. ಇಂತಹ ಸಂದರ್ಭಗಳಲ್ಲಿ ಮಹಿಳಾ ಆಯೋಗದ ಮಧ್ಯ ಪ್ರವೇಶಿಸುವಿಕೆ ಮತ್ತು ಉಸ್ತುವಾರಿ ಮೇಲ್ವಿಚಾರಣೆ ಅತ್ಯಗತ್ಯವಾಗಿ ಬೇಕಾಗುತ್ತದೆ. ಅಧಿಕಾರ ಹಂಚಿಕೊಳ್ಳುವಿಕೆಯಲ್ಲಿಯೇ ತಲ್ಲೀನರಾಗಿರುವ ಜೆಡಿ(ಎಸ್) ಹಾಗೂ ಬಿಜೆಪಿ ಪಕ್ಷಗಳಿಗೆ ಹೆಣ್ಣಿನ ಕಣ್ಣೀರಿನ ಬಿಸಿ ತಗಲುವುದೇ ? ಹೊರೆ ಹೊತ್ತ ಮಹಿಳೆ ಶಾಶ್ವತವಾಗಿ ಹೊರೆ ಹೊತ್ತು ನಿಂತಿರಬೇಕಾಗಿದೆ. 'ಮಾತೃದೇವ' ಎಂದು ಬೊಬ್ಬಿಡುವ ಬಿಜೆಪಿಯವರಿಗೆ ಮಹಿಳಾ ಪ್ರಾತಿನಿಧ್ಯವೆನ್ನುವುದು ಅಲರ್ಜಿಯ ವಿಷಯವಾಗಿದೆ.

ಇತ್ತೀಚೆಗೆ ಮಹಾನಗರ ಪಾಲಿಕೆಯ ಕಲ್ಯಾಣಾಧಿಕಾರಿ ಟಿ.ಪಿ. ಶಿವಾನಂದ ಎಂಬುವವನ 'ಕಪಿಚೇಷ್ಟೆ'ಯ ಬಾಲ ತುಂಡರಿಸಲು ಕೇಂದ್ರ ಮಹಿಳಾ ಆಯೋಗದ ಸದಸ್ಯರಾದ ನಿರ್ಮಲಾ ವೆಂಕಟೇಶ್‌ರವರು ಬೆಂಗಳೂರಿಗೆ ಆಗಮಿಸಿ ವಿಚಾರಣೆ ನಡೆಸಿ ಆ ಅಧಿಕಾರಿಗೆ ಶಿಕ್ಷೆಯಾಗುವಂತೆ ನೋಡಿಕೊಂಡದ್ದು ವರದಿಯಾಗಿದೆ. ನಗರ ಪಾಲಿಕೆಯ 300 ಮಂದಿ ಹೊಲಿಗೆ ಶಿಕ್ಷಕಿಯರಿಗೆ ಅಧಿಕಾರಿಯಾದ ಶಿವಾನಂದನ ಕಿರುಕುಳದಿಂದ ನಿವಾರಣೆ ಪಡೆಯಲು ಇಲ್ಲಿನ ನೊಂದ ಮಹಿಳೆಯರು ಕೇಂದ್ರ ಆಯೋಗದತ್ತ ರಕ್ಷಣೆಗೆ ಧಾವಿಸಿದ್ದು ನಮ್ಮ ರಾಜ್ಯದ ಸರ್ಕಾರಿ ಯಂತ್ರ ಮುರಿದು ಬಿದ್ದು ಅತಂತ್ರ ಸ್ಥಿತಿಯನ್ನು ಸೂಚಿಸುತ್ತದೆ.

ಇತ್ತೀಚಿನ ಶಾಲಾ ಕಾಲೇಜುಗಳಲ್ಲಿ ಶಿಕ್ಷಕರು ವಿದ್ಯಾರ್ಥಿನಿಯರಿಗೆ ಲೈಂಗಿಕ ಕಿರುಕುಳ ಕೊಡುವುದು ವರದಿಯಾಗುತ್ತಿದೆ. ಆಸ್ಪತ್ರೆಗಳಲ್ಲಿ, ಕಛೇರಿಗಳಲ್ಲಿ, ಕಾರ್ಖಾನೆಗಳಲ್ಲಿ ಲೈಂಗಿಕ ಕಿರುಕುಳದ ಪ್ರಕರಣಗಳು ಹಿಂದೆಂದಿಗಿಂತಲೂ ಹೆಚ್ಚಾಗಿಯೇ ವರದಿಯಾಗುತ್ತಿವೆ. 1997ರ ಸುಪ್ರೀಂ ಕೋರ್ಟು ಅಧಿಸೂಚನೆಯಂತೆ ದುಡಿಯುವ ಕ್ಷೇತ್ರಗಳಲ್ಲಿ ಲೈಂಗಿಕ ಕಿರುಕುಳದ ದೂರು ಸಮಿತಿಯು ರಚಿತವಾಗಬೇಕಾದ್ದು ಕಾನೂನು ಬದ್ಧವಾಗಿದ್ದರೂ ಎಷ್ಟೋ ಕಡೆಗಳಲ್ಲಿ ಈ ಸಮಿತಿ ರಚಿತವಾಗಿಲ್ಲ ; ಆಗಿದ್ದರೂ ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿಲ್ಲ. ಇದರ ಮೇಲ್ವಿಚಾರಣೆ ನಡೆಸುವುದು ಮತ್ತು ನಿಯಂತ್ರಿಸುವುದು ಸರ್ಕಾರದ ಹಾಗೂ ಮಹಿಳಾ ಆಯೋಗದ ಬಹುಮುಖ್ಯ ಕೆಲಸವಾಗಿದೆ. ಮಹಿಳಾ ಆಯೋಗವನ್ನು ರಚಿಸುವ ಗೊಡವೆಗೆ ಹೋಗದ ಮತ್ತು ಮಹಿಳಾ ಸಚಿವರನ್ನು ನೇಮಿಸದ ಸರ್ಕಾರಕ್ಕೆ ಮಹಿಳಾ ಪರ ಕಾಳಜಿಗಳು ಎಷ್ಟಿವೆ ? ಎಂಬುದು ನಮ್ಮ ಮುಖ್ಯ ಪ್ರಶ್ನೆಯಾಗಿದೆ. ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರ ಭಾಗವಹಿಸುವಿಕೆಯನ್ನು ಸಹಿಸಿಕೊಳ್ಳದ ಲಿಂಗ ರಾಜಕೀಯಕ್ಕೆ ಇತ್ತೀಚಿಗೆ ಜೋಗುಪಾಳ್ಯ ವಾರ್ಡಿನ ಮಂಗಳಾ ಅವರು ನೊಂದು ಆತ್ಮಹತ್ಯೆ ಮಾಡಿಕೊಳ್ಳಲು ಹೊರಟ ಪ್ರರಕಣವು ಮತ್ತೊಂದು ನಿದರ್ಶನವಾಗಿದೆ.

ಈ ಎಲ್ಲ ವಸ್ತುಸ್ಥಿತಿಯ ಹಿನ್ನೆಲೆಯಲ್ಲಿ ಸರ್ಕಾರವು ಕೂಡಲೇ ಮಹಿಳಾ ಆಯೋಗವನ್ನು ರಚಿಸಬೇಕು ಮತ್ತು ಆ ಆಯೋಗವು ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಅನುವು ಮಾಡಿಕೊಡಬೇಕು. ಹಾಗೆಯೇ ಮಂತ್ರಿಮಂಡಲದಲ್ಲೂ ಮಹಿಳೆಯರಿಗೆ ಪ್ರಾತನಿಧ್ಯ ಕೊಡಬೇಕು.

*– ಎನ್. ಗಾಯತ್ರಿ*

# ಘೋರ ದುರಂತ

-ಡಾ|| ಎಚ್. ಆರ್. ನಂದಿನೀದೇವಿ

ಪ್ರತಿಯೊಂದು ಜೀವಕ್ಕೂ ಹುಟ್ಟುವ ಹಕ್ಕಿದೆ. ಆ ಹುಟ್ಟುವ ಹಕ್ಕನ್ನು ಕಸಿದುಕೊಳ್ಳುವ ಹಕ್ಕು ಯಾರಿಗೂ ಇಲ್ಲ. ಅಂತೆಯೇ ತಂದೆ, ತಾಯಿಗಳಿಗೂ ಅವರ ಮಕ್ಕಳು ಎಂಬ ಅಧಿಕಾರದಿಂದ ಅವರ ಮಗುವಿನ ಹುಟ್ಟುವ ಹಕ್ಕನ್ನು ಕಸಿದುಕೊಳ್ಳುವ ಹಕ್ಕಿಲ್ಲ ಅಂದರೆ ಕೊಲ್ಲುವ ಹಕ್ಕಿಲ್ಲ.

ಸ್ತ್ರೀ ಭ್ರೂಣ ಹತ್ಯೆಯ ವಿಷಯಕ್ಕೆ ಬರೋಣ. ಹುಟ್ಟುವ ಮಗು ಗಂಡೋ, ಹೆಣ್ಣೋ ಎಂದು ಪರೀಕ್ಷಿಸುವುದು ಮೊದಲ ಅಪರಾಧ. ಇನ್ನು ಹೆಣ್ಣು ಮಗು (ಭ್ರೂಣ) ಎಂದು ಅದನ್ನು ಕೊಲ್ಲಿಸುವುದು ಘೋರ ಅಪರಾಧ. ಆ ಕೊಲೆ ಅಮಾನುಷವಾದುದ್ದು, ಅದಕ್ಕೆ ಕ್ಷಮೆಯೇ ಇಲ್ಲ. ಅದು ಕ್ಷಮಿಸಬಾರದ, ಕ್ಷಮಿಸಲಾಗದ ಅಪರಾಧ. ಮಾನವ ಹಕ್ಕು ಎಂದರೆ ಬದುಕುವ ಹಕ್ಕು. ಹುಟ್ಟಿದರೆ ಮಾತ್ರ ಬದುಕಲು ಸಾಧ್ಯ. ಆದ್ದರಿಂದ ಹುಟ್ಟುವ ಹಕ್ಕೂ ಮಾನವ ಹಕ್ಕು. ಅದು ಮಾನವ ಹಕ್ಕಿನ ಉಲ್ಲಂಘನೆಯಾದ ಕಾರಣ ಹೆಣ್ಣು ಭ್ರೂಣ ಹತ್ಯೆಯ ಪಾತಕಿಗಳನ್ನು ಉಗ್ರವಾಗಿ ಶಿಕ್ಷಿಸಲೇಬೇಕು.

ಹೆಣ್ಣು ಭ್ರೂಣ ಹತ್ಯೆಯ ಹಿಂದಿರುವ ಬಲವಾದ ಕಾರಣ ವರದಕ್ಷಿಣೆಯ ಪಿಡುಗು ಎಂದು ಅನೇಕರು ಅರ್ಥೈಸುತ್ತಾರೆ. ಮುಂದೆ ಮದುವೆಗೆ ಮಾಡಬೇಕಾದ ಅಪಾರವಾದ ಖರ್ಚಿನಿಂದ ಹೆದರಿದ ಪೋಷಕರು ಭ್ರೂಣ ಹತ್ಯೆಗೆ ಮೊರೆ ಹೋಗುತ್ತಾರೆ ಎಂದು ಇನ್ನು ಅನೇಕರು ವಿಶ್ಲೇಷಿಸುತ್ತಾರೆ. ಇದಕ್ಕೆ ಪರಿಹಾರವೆಂದರೆ ಅತ್ಯಂತ ಸರಳ ವಿವಾಹ. ಆದರೆ ಸರಳ ವಿವಾಹ ರೂಢಿ ಇರುವ ಸ್ಥಳಗಳಲ್ಲೂ ಈಗೀಗ ಸ್ತ್ರೀ ಭ್ರೂಣ ಹತ್ಯೆ ತಲೆ ಎತ್ತುತ್ತಿದೆ. ಆದ್ದರಿಂದ ಮದುವೆಯ ವೆಚ್ಚ ಒಂದೇ ಸ್ತ್ರೀ ಭ್ರೂಣ ಹತ್ಯೆಗೆ ಕಾರಣ ಅಲ್ಲ ಎಂಬ ಸತ್ಯ ಈಗೀಗ ಸ್ಪಷ್ಟವಾಗುತ್ತದೆ.

ಮಹಿಳೆಯ ಬವಣೆ ಬರೀ ವರದಕ್ಷಿಣೆಯ ಪಿಡುಗಿಗೆ ಮಾತ್ರ ಸೀಮಿತವಾಗಿಲ್ಲ. ಅದರಿಂದಾಚೆ ಅವಳನ್ನು ಹಿಂಸಿಸುವ ಕ್ರೂರವಾದ ಸಮಸ್ಯೆಗಳು, ನಾನಾ ದಿಕ್ಕಿನಿಂದ ಅವಳನ್ನು ಅವುಗಳ ಕ್ರೂರ ಬಾಹುಗಳಿಂದ ಬಿಗಿದಿವೆ. ಮಹಿಳೆಯನ್ನು ಆ ಎಲ್ಲಾ ನೋವಿನಿಂದ ಹಾಗೂ ಆ ಎಲ್ಲಾ ಸಮಸ್ಯೆಗಳಿಂದ ಬಿಡುಗಡೆ ಮಾಡಲು ಆ ಕ್ರೌರ್ಯದ ಬೇರುಗಳನ್ನು ಆಳಕ್ಕೆ ಇಳಿದು ನಾವು ಮೊದಲು ಹುಡುಕಬೇಕಾಗಿದೆ. ಈ ಕಾರ್ಯಕ್ರಮಗಳನ್ನು ಮೊದಲು ಗುರ್ತಿಸಬೇಕಾಗಿದೆ.

ಹೆಣ್ಣಿನ ಮದುವೆಗೆ ಅಪಾರವಾದ ಪ್ರಾಶಸ್ತ್ಯವನ್ನು ಕೊಟ್ಟಿರುವ ಈ ಸಮಾಜದ ಒಂದು ಭಾಗ ಅವಳ ಜೀವಕ್ಕೆ ಕಿಂಚಿತ್ತು ಬೆಲೆ ಕೊಟ್ಟಿಲ್ಲ. ಆದ್ದರಿಂದ ಮನೆಯ ಒಳಗಡೆ ಅಂದರೆ ಕುಟುಂಬದ ಒಳಗೆ ಅವಳ ಜೀವ ಅಮೂಲ್ಯವೆಂದು ಪರಿಗಣಿಸುವುದಿಲ್ಲ.

ಹೆಣ್ಣಿನ ಹಿತಕ್ಕಿಂತ ಮನೆತನದ ಗೌರವಕ್ಕಾಗಿಯೋ, ಸಮಾಜಕ್ಕಾಗಿಯೋ, ಬೇರೆಯವರಿಗಾಗಿಯೋ ಮಹಿಳೆಯ ವಿವಾಹ ಅದ್ದೂರಿಯಾಗಿ ಆಚರಿಸಲ್ಪಡುತ್ತದೆ. ಅದೆಲ್ಲಾ ಅವಳಿಗಾಗಿ ಮಾತ್ರ ಎಂದೂ ಅಲ್ಲ.

ಹುಡುಗಿಯ ಬುದ್ಧಿವಂತಿಕೆಗಿಂತ ಅವಳ ತಾತ್ಕಾಲಿಕವಾದ ರೂಪ ಲಾವಣ್ಯಗಳಿಗೆ ಈ ಸಮಾಜದ ಒಂದು ಭಾಗ ಬೆಲೆ ಕೊಡುತ್ತದೆ. ಆದ್ದರಿಂದ ರೂಪವತಿಯಲ್ಲದ ಹುಡುಗಿ ಕೀಳರಿಮೆಯಿಂದ ಕುಬ್ಜಳಾಗಿ ಹೋಗುತ್ತಾಳೆ. ಅವಳ ವ್ಯಕ್ತಿತ್ವವೇ ಕುಂಠಿತವಾಗುತ್ತದೆ. ಮದುವೆಯ ವೈಭವ, ಆ ಸಡಗರ, ಆ ಅಲಂಕಾರದಲ್ಲಿ, ಆ ಸಂಭ್ರಮದಲ್ಲಿ ಮಹಿಳೆಯ ವ್ಯಕ್ತಿತ್ವ ಕಳೆದು ಹೋಗುತ್ತದೆ.

ವಿವಾಹಕ್ಕಾಗಿ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡುವ ಪೋಷಕರು ಅವಳ ಆರೋಗ್ಯದ ವಿಷಯ ಬಂದಾಗ ಹಣ ಖರ್ಚು ಮಾಡಲು ಹಿಂದು ಮುಂದು ನೋಡುತ್ತಾರೆ.

ತಂದೆಯ ಮನೆಯಲ್ಲಿದ್ದಾಗ ಇದ್ದ ಚೂರೋ ಪಾರೋ ಸ್ವಾತಂತ್ರವೂ ನಂತರ ಮಹಿಳೆಯ ಪಾಲಿಗೆ ಅನೇಕ ವೇಳೆ ಮಾಯವಾಗುತ್ತದೆ.

ಹೆಣ್ಣು ಅವಳ ಆಸೆ, ಆಕಾಂಕ್ಷೆ, ಅವಳ ಕನಸು, ಅವಳ ಭಾವನೆ ಹೀಗೆ ಎಲ್ಲವನ್ನೂ ಮರೆತು ಕೊನೆಗೆ ಮಾತಾಡುವ ಗೊಂಬೆಯಾಗಿ ಬಿಡುತ್ತಾಳೆ. ಎಷ್ಟೋ ಸಲ ಮದುವೆಯ ನಂತರ ಅವಳ ಹೆಸರನ್ನು ಕೂಡ ಬದಲಾಯಿಸಿ ಬಿಡುತ್ತಾರೆ.

ಮಹಿಳೆ ಆರ್ಥಿಕವಾಗಿ ಸ್ವಾವಲಂಬಿಯಾಗದಿದ್ದರೆ, ಸರಳ ವಿವಾಹ ಜಾರಿಗೆ ಬಂದರೂ, ಗಂಡನ ಮನೆಯಲ್ಲಿ ಕಿರುಕುಳ ತಪ್ಪಿದಲ್ಲ. ಮಾತು ಮಾತಿಗೂ ಬಿಟ್ಟಿ ಊಟ ಹಾಕಬೇಕು ಎಂದು ಚುಚ್ಚಿ ಚುಚ್ಚಿ ಮಾನಸಿಕ ಹಿಂಸೆ ಉಂಟು ಮಾಡುತ್ತಾರೆ. ಜಗಳ ಹೀಗೆ ಪ್ರಾರಂಭವಾಗಿ ಕೊನೆಗೆ ಕೊಲೆಯಲ್ಲಿ ಕೊನೆಗೊಳ್ಳುವುದು ಅಥವಾ ಗಂಡ ಮನೆಬಿಟ್ಟು ಓಡಿಸಬಹುದು. ಮನೆಯಲ್ಲಿ ಅಪಾರವಾಗಿ ದುಡಿದರೂ ಅವಳ ದುಡಿಮೆಗೆ ಬಿಡಿಗಾಸು ಬೆಲೆ ಇಲ್ಲ.

ಗಂಡನ ಮನೆಯಿಂದ ಹೊರದೂಡಲ್ಪಟ್ಟ ಮಹಿಳೆಗೆ ನಿಲ್ಲಲು ಎಲ್ಲೂ ಜಾಗವಿರುವುದಿಲ್ಲ. ಕೊನೆಗೆ ಅವಳು ತವರಿಗೆ ಬರಬೇಕಾಗುತ್ತದೆ. ಅವಳಿಗೆ ತವರಿನಲ್ಲೂ ಸ್ವಾಗತವಿರುವುದಿಲ್ಲ. ವಿವಾಹಕ್ಕೆ ಮೊದಲು ಮುದ್ದಿನ ಮಗಳಾಗಿದ್ದವಳು ತಂದೆ-ತಾಯಿಗಳಿಗೆ ಅವಳು ಈಗ ಭಾರವಾಗುತ್ತಾಳೆ. ಅವಳ ಆಗಮನ ಅವಮಾನವೆಂದು ಪರಿಗಣಿಸಲ್ಪಡುತ್ತದೆ.

ಅಂತೆಯೇ ಗಂಡ ಸತ್ತರೂ ಹೆಣ್ಣು ತವರಿಗೆ ಬಂದು ಸೇರಿಕೊಳ್ಳಬೇಕಾಗುತ್ತದೆ. ಮನೆಯವರೇ ಅವಳನ್ನು ಅಮಂಗಲೆಯೆಂದು ಪರಿಗಣಿಸುತ್ತಾರೆ. ಅವಳಿಗೆ ಅವಳದು ಎಂದು ಹಣ ಇದ್ದರೆ ಅವಳು ಹೊರೆಯಾಗುವುದಿಲ್ಲ ಆದ್ದರಿಂದ ಮಹಿಳೆಗೆ ಒಂದು ಉದ್ಯೋಗ ಇದ್ದರೆ ಅವಳು ಸ್ವಾವಲಂಬಿಯಾಗಿ ಬದುಕಬಹುದು. ಆದ್ದರಿಂದ ಮಹಿಳೆಗೆ ಶಿಕ್ಷಣ ಹಾಗೂ ಉದ್ಯೋಗ ಬೇಕೇ ಬೇಕು. ಅಷ್ಟಾದರೂ ಅವಳು ಸ್ವತಂತ್ರವಾಗಿ ಒಂಟಿಯಾಗಿ ಸುರಕ್ಷಿತವಾಗಿ ಬದುಕಲಾರಳು. ಪಶುಗಳಂತಿರುವ ಕೆಲ ಜನರಿಂದ ಸುರಕ್ಷಿತರಾಗಿರಲು ಸಾಧ್ಯವಿಲ್ಲದ ಕಾರಣ ರಕ್ಷಣೆಗಾಗಿ ಸದಾ ಬೇರೆಯವರನ್ನು ಅವಳು ಅವಲಂಬಿಸ-ಬೇಕಾಗುತ್ತದೆ. ಅಂದರೆ ಆಶ್ರಯಿಸಬೇಕಾಗುತ್ತದೆ.

ಹಾಗಾದರೆ ಮಹಿಳೆಯ ಶತ್ರುಗಳು ಯಾರು ? ಮೂಢನಂಬಿಕೆಗಳು, ಅಂಧವಿಶ್ವಾಸಗಳು, ಕಂದಾಚಾರಗಳು ಮಹಿಳೆಯ ಪರಮ ಶತ್ರುಗಳು. (ಕುಂಕುಮ ಇಟ್ಟು ಮುತ್ತೈದೆ ಎನ್ನುವುದು, ಕುಂಕುಮ ಅಳಿಸಿ ವಿಧವೆ ಎನ್ನುವುದು) ಅವುಗಳು ಅವಳನ್ನು ಘಟಸರ್ಪಗಳಂತೆ ಸುತ್ತಿಕೊಂಡಿರುವುದರಿಂದ ಅವುಗಳಿಂದ ಬಿಡಿಸಿಕೊಳ್ಳಲಾಗದೆ, ಬದುಕಲೂ ಆಗದೆ, ಸಾಯಲೂ ಆಗದೆ ಮಹಿಳೆ ಜೀವಂತ ಶವವಾಗಿ ಜೀವನ ಪೂರ್ತಿ ಒದ್ದಾಡಬೇಕಾಗುತ್ತದೆ.

ಜಗತ್ತಿನ ಯಾವ ಸಮಾಜದಲ್ಲೂ ಇಲ್ಲದ ಅಗೌರವಗಳು ಭಾರತೀಯ ಸಮಾಜದಲ್ಲಿ ಮಹಿಳೆಯ ಮೇಲಿದೆ.

ಗಂಡ ಸತ್ತರೆ ವೈವಿಧ್ಯದ ಕ್ರೂರ ಪದ್ಧತಿಗಳು ಅವಳನ್ನು ಎಷ್ಟು ಅವಮಾನ ಮಾಡುತ್ತವೆ ಎಂದರೆ ಸ್ವಲ್ಪಸ್ವಲ್ಪವಾಗಿ ಈ ರೀತಿ ಅಮಂಗಲೆ ಎಂದು ಹೇಳಿಸಿಕೊಂಡು ನಿಧಾನವಾಗಿ ಸಾಯುವುದಕ್ಕಿಂತ ಸತೀ ಪದ್ಧತಿಯೇ ಎಷ್ಟೋ ವಾಸಿ ಎಂದು ನೊಂದ ಮಹಿಳೆಯ ಬಾಯಲ್ಲೇ ಅನೇಕ ವೇಳೆ ಈ ಕ್ರೂರ ಪದ್ಧತಿಗಳು ಹೇಳಿಸುತ್ತವೆ.

ಎಷ್ಟೋ ಹೆಣ್ಣು ಮಕ್ಕಳು ಅಮ್ಮ ನನ್ನನ್ನು ಹುಟ್ಟಿದಾಗಲೇ ಕತ್ತು ಹಿಸುಕಿ ಸಾಯಿಸಿದ್ದರೆ ಈ ದಿನ ಈ ನೋವು ಇರುತ್ತಿರಲಿಲ್ಲ ಎಂದು ಕಷ್ಟದ ಸಮಯದಲ್ಲಿ ತಾಯಿಯನ್ನು ಕೇಳುವುದಿದೆ.

ಮಗಳು ಅಮಂಗಲೆ ಎಂದು ಗೋಳಾಡುವಾಗ ನೀನು ಹುಟ್ಟದಿದ್ದರೆ ಎಷ್ಟೋ ಚೆನ್ನಾಗಿತ್ತು ಎಂದು ತಾಯಿ ಹೇಳುತ್ತಾಳೆ. ಅರಿಶಿನ, ಕುಂಕುಮ ಇಲ್ಲದ ನಿನ್ನ ಹಣೆಯನ್ನು ನೋಡುವ ಬದಲು ಅಳಿಯಂದಿರ ಬದಲು ನೀನೇ ಸಾಯಬಾರದ ಎಂದು ಎಷ್ಟೋ ತಾಯಂದಿರು ಹೇಳಿ ಅತ್ತು ಗೋಳಾಡುತ್ತಾರೆ.

ಮಹಿಳೆಗೆ ಮಾತ್ರ ಶೀಲ ಚೆನ್ನಾಗಿರಬೇಕು ಎಂದು ಸಮಾಜದ ಒಂದು ಭಾಗ ನಿರೀಕ್ಷಿಸುತ್ತದೆ. ಆದ್ದರಿಂದ ತಂದೆ-ತಾಯಿಗಳು ಮಗಳನ್ನು ಕಣ್ಣಲ್ಲಿಟ್ಟು ರಕ್ಷಿಸಬೇಕಾಗುತ್ತದೆ. ಕೆಟ್ಟ ಜನರ ಬಾಯಿಗೆ ಆಹಾರವಾಗದಂತೆ ಹೆಜ್ಜೆ ಹೆಜ್ಜೆಗೂ ಮಹಿಳೆ ತನ್ನ ಶೀಲದ ಬಗ್ಗೆ ಸಮರ್ಥಿಸಿಕೊಳ್ಳಬೇಕಾಗುತ್ತದೆ. ನಾರಿತ್ವಕ್ಕೆ ಇದಕ್ಕಿಂತ ಅವಮಾನ ಇಲ್ಲ.

ಅತ್ಯಾಚಾರ ಮಹಿಳೆಯ ತಲೆಯ ಮೇಲೆ ನೇತಾಡುತ್ತಿರುವ ಕತ್ತಿ. ಮಹಿಳೆ ಸದಾ ಭಯದ ನೆರಳಲ್ಲೇ ಬದುಕುವಂತೆ ಮಾಡಿದೆ. ಅತ್ಯಾಚಾರ ಎಸುಗಿದ ದುಷ್ಟ ಮಾನಗೆಟ್ಟವನಲ್ಲ. ಅತ್ಯಾಚಾರಕ್ಕೊಳಗಾದ ಮುಗ್ಧ ಮಹಿಳೆಯ ಮಾನ ಹೋಯಿತು ಎನ್ನುವುದು ಎಂತಹ ಹಾಸ್ಯಾಸ್ಪದವಾದ ಮಾತು. ಇದೊಂದೇ ಸಾಕು ಹೆಣ್ಣು ಗಂಡಿನ ಮಧ್ಯೆ ಇರುವ ನ್ಯಾಯವೇ ಅತ್ಯಂತ ಅನ್ಯಾಯ, (ತಾರತಮ್ಯ) ದಿಂದ ಕೂಡಿದೆ ಎಂದು ತೋರಿಸುತ್ತದೆ.

ಅತ್ಯಾಚಾರ ಎಸುಗಿದ ರಾಕ್ಷಸ ಅಪವಿತ್ರನಾಗುವುದಿಲ್ಲ. ಅತ್ಯಾಚಾರಕ್ಕೆ ಒಳಗಾದ ನಿರಪರಾಧಿ ಮಹಿಳೆ ಅಪವಿತ್ರವಾಗುತ್ತಾಳೆ ಎಂದು ಹೇಳುವ ಈ ಮಾತೇ ಬಾಲಿಶಃವಾದುದ್ದು ಅವೈಜ್ಞಾನಿಕವಾದುದ್ದು ಹಾಗೂ ಅತ್ಯಂತ ಕ್ರೂರವಾದದ್ದು.

ಶೀಲಗೆಟ್ಟವನೇ ಅತ್ಯಾಚಾರ ಎಸಗುತ್ತಾನೆ. ಆದರೆ ಅತ್ಯಾಚಾರಕ್ಕೊಳಗಾದ ಮಹಿಳೆಯ ಶೀಲ ಹೋಯಿತು ಎನ್ನುವುದು ಅವಳಿಗೆ ಅವಮಾನ ಮಾಡುವುದಕ್ಕಿಂತ ಅಮಾನವೀಯವಾದುದೇ. ನಿಜವಾಗಿ ಇದು ಕಾಡು ನ್ಯಾಯ. ಮಹಿಳೆಯ ಶೀಲ ಹೋಗಲಿಲ್ಲ, ಶೀಲ ಹೋಗಿದ್ದು ಅತ್ಯಾಚಾರಿದು. ಅತ್ಯಾಚಾರಿಯನ್ನು ಒಬ್ಬ ಪಶು ಎಂದು ಪರಿಗಣಿಸಬೇಕು.

ಈ ಶೀಲದ ಅಳತೆಗೋಲೆ ದೋಷಪೂರಿತವಾಗಿದೆ. ಈ ಸಮಾಜ ನಾರಿಯ ಭಾಗಕ್ಕೆ ಎಷ್ಟು ಕ್ರೂರವಾಗಿದೆ ಎಂದು ಮಹಿಳೆಯ ಬಗ್ಗೆ ಇರುವ ಈ ತಾರತಮ್ಯವೇ ತೋರಿಸುತ್ತದೆ.

ಕೆಲ ಸಂಪ್ರದಾಯಗಳು ನಮ್ಮ ಸಮಾಜದಲ್ಲಿ ಮಹಿಳೆಯನ್ನು ಅವಮಾನ ಮಾಡಲು, ಮಹಿಳೆಯನ್ನು ಹಿಂಸಿಸಲು, ಮಹಿಳೆಯನ್ನು ಕೊಲ್ಲಲು ಚುಚ್ಚಿ ಚುಚ್ಚಿ ಹಿಂಸಿಸಿ ನಿಧಾನವಾಗಿ ಮಾನಸಿಕವಾಗಿ ಮಾಡಿದಂತಿದೆ.

ಸತೀ ಪದ್ಧತಿ ಇದ್ದ ಈ ದೇಶದಲ್ಲಿ ಹೆಣ್ಣು ಶಿಶು ಹತ್ಯೆ ಇದ್ದ ಈ ದೇಶದಲ್ಲಿ, ಕೆರೆ ಕಟ್ಟೆಗೆ ಗರ್ಭಿಣಿ ಹೆಂಗಸನ್ನು ಬಲಿ ಕೊಡುವ ಈ ದೇಶದಲ್ಲಿ ಮಹಿಳೆಯನ್ನು ಬಲಿ ಕೊಡುವ ಈ ದೇಶದಲ್ಲಿ ಎಲ್ಲಕ್ಕಿಂತ ಭಯಂಕರವಾದ "ಜೌಹರ್ ಪದ್ಧತಿ" ಎಂಬ ಅಮಾನವೀಯ-ವಾದ ನೀಚ ಪದ್ಧತಿ ಇದ್ದ ಈ ದೇಶದಲ್ಲಿ (ಶತ್ರು ಬಂದಾಗ ಮಹಿಳೆಯರು, ಹೆಣ್ಣು ಮಕ್ಕಳು ಸಾಮೂಹಿಕವಾಗಿ ಅಗ್ನಿ ಪ್ರವೇಶ ಮಾಡುವ ಪದ್ಧತಿ ಇದ್ದ ಈ ದೇಶದಲ್ಲಿ).

ಮಹಿಳೆಯ ವಿಷಯದಲ್ಲಿ ಬಗೆ ಬಗೆಯ ಕ್ರೌರ್ಯಗಳಿರುವ ಈ ಸಮಾಜದಲ್ಲಿ ಸ್ತ್ರೀ ಭ್ರೂಣ ಹತ್ಯೆ ಒಂದು ಬಾಕಿ ಇತ್ತು ಅಷ್ಟೇ. ನಾರಿ ಜಾತಿಯನ್ನೇ ನಿಧಾನವಾಗಿ ನಾಶ ಮಾಡುವ ಕ್ರೂರ ಪದ್ಧತಿಗಳ ಪಟ್ಟಿಗೆ ಸ್ತ್ರೀ ಭ್ರೂಣ ಹತ್ಯೆಯೂ ಒಂದು ಈಗ ಸೇರಿಕೊಂಡಿದೆ.

ಹೆಣ್ಣನ್ನು ಭಾರ ಎನ್ನುವ, ಹೆಣ್ಣನ್ನು ಸಾಲ ಎನ್ನುವ ಹೆಣ್ಣು ಮಕ್ಕಳ ಮುಂದೆಯೇ ಹೆಣ್ಣು ಮಕ್ಕಳಿಗಿಂತ, ಗಂಡು ಮಕ್ಕಳ ಹುಟ್ಟನ್ನು ಸ್ವಾಗತಿಸುವ ಹೆಣ್ಣನ್ನು ಹಿಂಸಿಸುವ ಈ ಅನಾಗರೀಕ ಸಮಾಜಕ್ಕೆ, ಈ ಆಧುನಿಕ ತಂತ್ರಜ್ಞಾನದಿಂದ ಭ್ರೂಣ ಹೆಣ್ಣು ಎಂದು ತಿಳಿಯುವ ಅವಕಾಶ ಬೇರೆ ಸಿಕ್ಕಿದೆ.

ಹೆಣ್ಣಾಗಿ ಹುಟ್ಟಿದ ಪಾಪ ಪರಿಹಾರಕ್ಕೆ ಋಷಿ ಪಂಚಮಿ ಎಂಬ ವ್ರತ ಇದೆ. ಹೆಂಗಸು ಅರವತ್ತು ವರ್ಷಗಳು ಬದುಕಿದ್ದಕ್ಕೆ ಷಷ್ಠಿ ಪೂರ್ತಿ ಶಾಂತಿ ಇಲ್ಲ, ಎಂದರೆ ಹೆಣ್ಣಿಗೆ ದೀರ್ಘ ಆಯಸ್ಸು ಸಂತೋಷದ ವಿಷಯವಲ್ಲ. ಆದರೆ ಗಂಡು ಅರವತ್ತು ವರ್ಷ ಬದುಕಿದರೆ ಅದಕ್ಕೆ ಷಷ್ಠಿ ಪೂರ್ತಿ ಶಾಂತಿ ಇದೆ. ಎಂಬತ್ತು ವರ್ಷ ಬದುಕಿದರೆ ಅದಕ್ಕೆ ಭೀಮ ಶಾಂತಿ ಇದೆ. ಮಗ ಸತ್ತರೆ ಅಮಂಗಲ, ಸೊಸೆ ಸತ್ತರೆ ಶುಭ ! ಏಕೆ ? ಮನೆಯ ಮುಂದೆ ಹಸಿರು ಚಪ್ಪರ ಹಾಕಬಹುದು. ಮೂರು ತಿಂಗಳ ಒಳಗೆ ಮಗನಿಗೆ ಪುನಃ ಮರು ಮದುವೆ ಮಾಡಬಹುದು. ಮಗನಿಗೆ ಮೊಮ್ಮಗ ಹುಟ್ಟಿದರೆ ಕನಕಾಭಿಷೇಕ ಉಂಟು. ಅದೇ ಮೊಮ್ಮಗಳು ಹುಟ್ಟಿದರೆ ಏನೂ ಇಲ್ಲ. ಅಂದರೆ ಪೂರ್ವದಲ್ಲಿರುವ ಎಲ್ಲಾ ಸಂಪ್ರದಾಯಗಳು ತಾರತಮ್ಯದಿಂದ ಕೂಡಿದೆ. ಮಹಿಳೆಯ ಪಾಲಿಗೆ ಒಳ್ಳೆಯ ಕಾರ್ಯಕ್ರಮಗಳು ಒಂದೂ ಇಲ್ಲ.

ಗಂಡ ಯುದ್ಧದಲ್ಲಿ ಸತ್ತರೆ ಹೆಂಡತಿ ಊರಲ್ಲೇ ಆತ್ಮಹತ್ಯೆ ಮಾಡಿಕೊಳ್ಳಬೇಕು. ಅವಳ ಹೆಸರಿಗೆ ಮಾಸ್ತಿ ಕಲ್ಲು ನೆಟ್ಟು ಗೌರವಿಸುತ್ತಾರೆ. ಅವಳು ಬದುಕಿದರೆ ಬೆಲೆ ಇಲ್ಲ, ಅದೇ ಸತ್ತರೆ ಬೆಲೆ ಅಂದರೆ ಗೌರವ. ಹೀಗೆ ಹೆಣ್ಣಿನ ಪ್ರಾಣಕ್ಕೂ ಬೆಲೆಯಿಲ್ಲ, ಅವಳ ಬದುಕಿಗೂ ಬೆಲೆ ಇಲ್ಲ, ಆದ್ದರಿಂದ ಈ ಸಮಾಜದಲ್ಲಿ ಹೆಣ್ಣು ಭ್ರೂಣ ಹತ್ಯೆ ಬರದೆ ಇನ್ನೇನು ಬರಲು ಸಾಧ್ಯ ?

ಅಭೇದ್ಯವಾದ ಸುರಕ್ಷಿತವಾದ ತಾಯಿಯ ಗರ್ಭದಲ್ಲಿದ್ದ ಹೆಣ್ಣು ಶಿಶುವನ್ನು ಅದು ಕಣ್ಣು ಬಿಡುವ ಮೊದಲೇ ಅದನ್ನು ಕೊಲ್ಲುವ ಕ್ರೌರ್ಯವನ್ನು ತೋರಲು ನಾರಿ ಜಾತಿಯನ್ನು ನಾಶ ಮಾಡುವ ಪಾಪಿಗಳ ಕೈಗೆ ಈ ಆಧುನಿಕ ತಂತ್ರಜ್ಞಾನದಿಂದ ಭ್ರೂಣ ಹೆಣ್ಣು ಎಂದು ತಿಳಿಯುವ ಅವಕಾಶ ಬೇರೆ ಸಿಕ್ಕಿದೆ.

ಲಿಂಗ ತಾರತಮ್ಯದಿಂದ ಮೊದಲೇ ಕೊಳೆತು ನಾರುತ್ತಿರುವ ಈ ರಾಕ್ಷಸಿ ಸಮಾಜದ ಒಂದು ಭಾಗಕ್ಕೆ ಲಿಂಗ ಪತ್ತೆ ಹಚ್ಚುವ ಉಪಕರಣ ಸಿಕ್ಕಿರುವುದು ಇಪ್ಪತ್ತನೆಯ ಶತಮಾನದ ದುರಂತಗಲ್ಲಿ ಅತ್ಯಂತ ಘೋರ ದುರಂತ. ಇದನ್ನು ಜಿನೋಸೈಡ್ ಎಂದು ಪರಿಗಣಿಸಿ ವಿಶ್ವ ಸಂಸ್ಥೆಗೆ ತೆಗೆದುಕೊಂಡು ಹೋಗಬೇಕು. ಮಹಿಳೆಯ ಬವಣೆಯನ್ನು ಪರಿಹರಿಸಲು ಈ ಕೆಳಕಂಡಂತೆ ಸಲಹೆಗಳನ್ನು ಕೊಟ್ಟಿದೆ.

1) ಅತ್ಯಂತ ಸರಳವಾದ ವಿವಾಹ 2) ವಿವಾಹವನ್ನು ಖಡ್ಡಾಯವಾಗಿ ನೊಂದಾಯಿಸುವುದು 3) ಮಹಿಳೆ ಅವಳನ್ನು ಅವಳೇ ರಕ್ಷಿಸಿಕೊಳ್ಳುವಂತೆ ದೈಹಿಕವಾಗಿ, ಬಲಾಢ್ಯಳಾಗುವ ಶಿಕ್ಷಣವನ್ನು ಕೊಡಬೇಕು. ಎಂದರೆ ಕರಾಟೆ, ಜುಡೋ, ಈಜು ಮುಂತಾದವುಗಳಿಗೆ ವಿಶೇಷ ಒತ್ತು ಕೊಡುವ ಶಿಕ್ಷಣವನ್ನು ಕೊಡುವುದು. 4) ಆರ್ಥಿಕವಾಗಿ ಮೊದಲು ಸ್ವಾವಲಂಬಿಯಾಗಲು ತಿಂಗಳಿಗೆ ಸಂಬಳ ಸಿಗುವ ಖಾಯಂ ಉದ್ಯೋಗ ಕೊಡಬೇಕು. ಇಷ್ಟಾದರೂ ಸಮಾಜ ಬದಲಾವಣೆಯಾಗದಿದ್ದರೆ ಮಹಿಳೆಯ ಕಣ್ಣೀರಿನ ಝರಿಗಳು ಗಂಗಾನದಿಯ ಉಪನದಿಗಳಾಗಿ ಹರಿಯುತ್ತಲೇ ಇರುತ್ತದೆ. ಅದು ತಪ್ಪುವುದಿಲ್ಲ.

ಮೂಢ ನಂಬಿಕೆಗಳು, ಕಂದಾಚಾರಗಳು, ಅಂಧಃವಿಶ್ವಾಸಗಳಿಲ್ಲದ ವೈಜ್ಞಾನಿಕ ಮನೋಭಾವಗಳಿಂದ ಕೂಡಿದ ಸಮಾಜ ಮಾತ್ರ ಅವಳನ್ನು ಈ ಮಾನಸಿಕ ಹಿಂಸೆಯಿಂದ ಹೊರ ತರಲು ಸಾಧ್ಯ. ರಕ್ಷಿಸಲು ಸಾಧ್ಯ.

ಮಹಿಳೆಗೆ ಸ್ವತಂತ್ರ ವ್ಯಕ್ತಿತ್ವವೇ ಇಲ್ಲದ ಸದಾ ನೆರಳಾಗಿ ಬದುಕುವ ಇಂತಹವರ ಮಗಳು, ಇಂತಹವರ ಹೆಂಡತಿ ಎಂದು ಮಾತ್ರ ಗುರುತಿಸುವುದು ತಪ್ಪಿ ಅಂತಹ ಸಮಾಜ ಅವಳನ್ನು ಮನುಷ್ಯಳಾಗಿ ಗುರುತಿಸುವ ಸಮಾಜ ಬೇಕು. ರಾತ್ರಿ ಎರಡು ಗಂಟೆಯಲ್ಲೂ ಸುರಕ್ಷಿತವಾಗಿ, ಓಡಾಡುವ, ಮರದ ಕೆಳಗೂ ಸುರಕ್ಷಿತವಾಗಿ ಬದುಕುವ ವಾತಾವರಣ ನಿರ್ಮಾಣವಾದಾಗ ಮಾತ್ರ ಮಹಿಳೆ ಮನುಷ್ಯಳಾಗಿ ತಲೆ ಎತ್ತಿ ಬದುಕಬಹುದು. ಅದಕ್ಕಾಗಿ ದೇಶದ ಉದ್ದಗಲಕ್ಕೂ ಪ್ರಬಲವಾದ ಪ್ರೌಢ ಮಹಿಳಾ ಹೋರಾಟ ಆಗಬೇಕಾಗಿದೆ. ಸಮಾನತೆ, ಸ್ವಾತಂತ್ರ್ಯ ಮತ್ತು ವಿಮೋಚನೆ ಎಂಬ ಧ್ಯೇಯದಿಂದ ಕೂಡಿದ ಮಹಾನ್ ಹೋರಾಟವಾಗಬೇಕು. ಲಿಂಗ ತಾರತಮ್ಯವಿಲ್ಲದ, ಪುರುಷ ಪ್ರಧಾನವಲ್ಲದ, ವೈಜ್ಞಾನಿಕ ಮನೋಭಾವದ ಸಮ ಸಮಾಜ ನಿರ್ಮಾಣವಾಗುವವರೆಗೆ ಭ್ರೂಣ ಹತ್ಯೆ ನಿಲ್ಲುವುದು ಮರೀಚಿಕೆಯೇ ಸರಿ. ಈ ಹೋರಾಟ ನಿರಂತರವಾದುದು. ಕರುಣೆ, ದಯೆ, ಶಾಂತಿ, ಸಮಾನತೆ, ಪ್ರೇಮ, ಮಾನವೀಯತೆಯಿಂದ ಕೂಡಿದ, ಮಾನವೀಯ ಮೌಲ್ಯಗಳಿಂದ ಕೂಡಿದ ಪರ್ಯಾಯವೊಂದೇ ಮಹಿಳೆಯನ್ನು ಮಾನವಳಾಗಿ ಪರಿಗಣಿಸಲು ಸಾಧ್ಯ. ಅಂತಹ ಪರ್ಯಾಯಕ್ಕಾಗಿ ಕೈ ಜೋಡಿಸೋಣ. ಅಂತಹ ಪರ್ಯಾಯದ ನಿರ್ಮಾಣಕ್ಕಾಗಿ ಆಗುವ ಹೋರಾಟಕ್ಕೆ ಮಹಿಳೆಯರೇ ನಾಯಕರಾಗಬೇಕೆಂದು ಆಶಿಸೋಣ.

*ದೇಶದಲ್ಲಿ ಏಡ್ಸ್ ಪೀಡಿತರಲ್ಲಿ ಶೇ. 40ರಷ್ಟು ಮಹಿಳೆಯರೇ ಇದ್ದಾರೆ. ಹೆಚ್‌ಐವಿ ಪೀಡಿತರಲ್ಲಿ ಶೇ. 86ರಷ್ಟು ಮಂದಿಗೆ ಸಂಗಾತಿಗಳಿಂದಲೇ ಸೋಂಕು ತಗುಲಿದೆ. ಶೇ. 2.5ರಷ್ಟು ಮಕ್ಕಳಿಗೆ ತಾಯಿಯಿಂದ ಸೋಂಕು ಬಂದಿದೆ. ರಕ್ತದಾನದ ಮೂಲಕ ಈ ರೋಗ ಹರಡುವಿಕೆ ಶೇ. 8 ರಿಂದ ಶೇ. 2ಕ್ಕೆ ಇಳಿದಿದೆ.*

# ಹಸೀನಾ ಗಾಥೆ

*- ಹೇಮಲತಾ ಮಹಿಷಿ*

ಹಸೀನಾ ಎನ್ನುವ 20 ವರ್ಷದ ಸುಂದರ ಯುವತಿಯೊಬ್ಬಳಿದ್ದಳು. ತನ್ನ ಮುಂದಿನ ಜೀವನದ ಬಗ್ಗೆ ಬಣ್ಣ-ಬಣ್ಣದ ಕನಸು ಕಾಣುತ್ತಾ ಬಿ.ಕಾಂ. ಮೊದಲ ವರ್ಷ ಓದುತ್ತಲೇ ಕಂಪ್ಯೂಟರ್ ಕೋರ್ಸ್ ಮುಗಿಸಿದ್ದಳು. ಆ ವಿದ್ಯೆ ತನಗೆ, ತನ್ನಂತಹವರಿಗೆ ನೆಮ್ಮದಿಯಿಂದ ಜೀವನ ನಡೆಸುವ ಲೋಕಕ್ಕೆ ಬಾಗಿಲು ತೆರೆಯುವುದೆಂದು ಆಶಿಸಿ ನೇಹಾ ಕಂಪ್ಯೂಟರ್ಸ್ ಎನ್ನುವಲ್ಲಿ ಕೆಲಸಕ್ಕೆ ಸೇರಿದ್ದಳು. ಕೆಲಸಕ್ಕೆ ಸೇರಿದ 1 ವರ್ಷ 8 ತಿಂಗಳ ವೇಳೆಗೆ ಆ ಕಂಪ್ಯೂಟರ್ ಕಂಪನಿ ನಷ್ಟ ಅನುಭವಿಸತೊಡಗಿದಾಗ ತನ್ನ ಭವಿಷ್ಯದ ಭದ್ರತೆಯನ್ನು ಅರಸಿಕೊಂಡು ಎಚ್.ಎಂ.ಟಿ. ಲೇಔಟ್‌ನಲ್ಲಿದ್ದ ಸತೀಶ್ ಇಂಡಸ್ಟ್ರೀಸ್ ಎನ್ನುವ ಮತ್ತೊಂದು ಜಾಗದಲ್ಲಿ ಕೆಲಸಕ್ಕೆ ಸೇರಿಕೊಂಡಳು. ಆದರೆ, ಅವಳ ಈ ನಿರ್ಧಾರ ಅವಳ ಹಿಂದಿನ ಕಂಪನಿಯ ಮಾಲೀಕ ಜೋಸೆಫ್ ರೋಡ್ರಿಗ್ಸ್‌ಗೆ ಇಷ್ಟವಾಗಲಿಲ್ಲ. ಅವಳು ಹೊಸ ಕೆಲಸವನ್ನು ಬಿಟ್ಟು ತನ್ನ ಮನೆಯಿಂದಲೇ ಕೆಲಸ ಮಾಡಬೇಕೆಂದು ಅದಕ್ಕೆ ಬೇಕಾದ ಕಂಪ್ಯೂಟರ್ ಮತ್ತಿತರ ಪರಿಕರಗಳನ್ನು ತಾನೇ ಒದಗಿಸುವು-ದಾಗಿಯೂ ಒಂದೇ ಸಮನೆ ಅವಳ ಮೇಲೆ ಒತ್ತಾಯ ಹೇರತೊಡಗಿದ. ಹಸೀನಾ ಅದನ್ನು ನಿರಾಕರಿಸಿದಾಗಲೂ ಬಿಡದೇ ಅನೇಕ ಬಾರಿ ಅವಳ ಮನೆಗೂ ಹೋಗಿ ಕಾಡಿಸತೊಡಗಿದ. ತನಗೆ ಹೊಸ ಕೆಲಸ ಇಷ್ಟವಾಗಿದೆ. ಅದನ್ನು ಬಿಡುವುದಿಲ್ಲ ಎಂದು ಅವಳು ಹೇಳಿದಾಗ ರೋಡ್ರಿಗ್ಸ್ ಕೋಪಗೊಂಡು, ತನ್ನ ಸಲಹೆಯಂತೆ ನಡೆಯದಿದ್ದರೆ ಅದರ ಪರಿಣಾಮ ಎದುರಿಸಬೇಕಾಗುವುದೆಂದು ಬೆದರಿಕೆಯನ್ನು ಒಡ್ಡಿದ.

ಬೆದರಿಕೆಗೆ ಮಣಿಯದ ಹಸೀನಾ ದಿನಾಂಕ 20-11-1999ರಂದು ಎಂದಿನಂತೆ ಬೆಳಿಗ್ಗೆ 8 ಗಂಟೆಗೆ ಕೆಲಸಕ್ಕೆ ಹೋಗಲು ಮನೆ ಬಿಟ್ಟಾಗ ಸತೀಶ್ ಇಂಡಸ್ಟ್ರೀಸ್ ಹತ್ತಿರವೇ ತನ್ನ ಉದ್ದಿಮೆಯನ್ನು ಹೊಂದಿದ್ದ ನೆರೆಯ ಕೃಷ್ಣಾ ಎನ್ನುವ ಹಿರಿಯರು ಅವಳನ್ನು ತಮ್ಮ ವಾಹನದಲ್ಲಿ ಕರೆದುಕೊಂಡು ಹೋಗಿ ಅವಳ ಕೆಲಸದ ಜಾಗದ ಬಳಿ 8.25ರ ವೇಳೆಗೆ ಅವಳನ್ನು ಬಿಟ್ಟು ಹೋದರು. ಹಸೀನಾ ಸತೀಶ್ ಇಂಡಸ್ಟ್ರೀಸ್ ಗೇಟಿನ ಬಳಿ ಬರುವ ಸಮಯಕ್ಕೆ ರೋಡ್ರಿಗ್ಸ್ ತನ್ನ ಮೋಟರ್ ಸೈಕಲ್‌ನಲ್ಲಿ ಅಲ್ಲಿಗೆ ಬಂದ, ಅವನ ಕೈಯಲ್ಲಿ ಒಂದು ಪ್ಲಾಸ್ಟಿಕ್ ಜಗ್ ಇತ್ತು. ಹಸಿನಾ ಹತ್ತಿರ ಬಂದವನೇ ಅವಳಿಗೆ ಏನಾಗುತ್ತಿದೆಯೆಂದು ತಿಳಿಯುವ ಮೊದಲೇ ಆ ಜಗ್‌ನಲ್ಲಿದ್ದುದನ್ನು ಅವಳ ಮೇಲೆ ಎರಚಿ, ಮೋಟಾರ್ ಸೈಕಲ್‌ಮೇಲೆ ಪರಾರಿಯಾದ. ಅವಳ ಮೇಲೆ ಅವನು ಎರಚಿದ ದ್ರವ ಸಲ್ಫೂರಿಕ್ ಆ್ಯಸಿಡ್ ಆಗಿತ್ತೆನ್ನುವುದನ್ನು ನಂತರದ ರಸಾಯನಿಕ ಪರೀಕ್ಷೆ ದೃಢಪಡಿಸಿತು. ಮೈ ತುಂಬಾ ಚೆಲ್ಲಿದ ಆ್ಯಸಿಡ್‌ನಿಂದಾಗಿ ಹಸೀನಾಳ ಮುಖ, ಕಣ್ಣುಗಳು, ಎದೆಯ ಭಾಗ, ಕೈ ಕಾಲುಗಳು ತೀವ್ರತರವಾಗಿ ಸುಟ್ಟು ಹೋಗಿ ಗಾಯಗಳಾದವು. ಅದರೊಂದಿಗೆ ಅವಳ ಕನಸುಗಳೂ ಸುಟ್ಟು ಬೂದಿಯಾದರು. ನೋವು ತಾಳಲಾರದೇ ಕಿರಿಚಿಕೊಂಡಾಗ ಹತ್ತಿರವಿದ್ದ ಜನರು ಓಡಿಬಂದರು. ಮೊದಲು ಎಚ್.ಎಂ.ಟಿ. ಆಸ್ಪತ್ರೆಗೆ, ರಾಮಯ್ಯ ಆಸ್ಪತ್ರೆಗೆ ಕರೆದೊಯ್ದು ಕೊನೆಯಲ್ಲಿ ಇಂತಹ ಕ್ರಿಮಿನಲ್ ಪ್ರಕರಣಗಳಿಗೆ ಮೀಸಲಾಗಿರುವ ವಿಕ್ಟೋರಿಯಾ ಆಸ್ಪತ್ರೆಗೆ ಅವಳನ್ನು ಕರೆತರಲಾಯಿತು.

ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುವಾಗ ಈ ಪ್ರಕರಣದ ಬಗ್ಗೆ ಮಾಹಿತಿ ಪಡೆದ ಪೋಲೀಸರು ಅಲ್ಲಿಗೆ ಬಂದು ಅವಳಿಂದ ಹೇಳಿಕೆ ಪಡೆದರು. ಅದನ್ನೇ ಪ್ರಥಮ ಮಾಹಿತಿ / ದೂರನ್ನಾಗಿ ಪರಿಗಣಿಸಿ ಮೊಕದ್ದಮೆಯನ್ನು ದಾಖಲಿಸಿಕೊಂಡರು. ಮುಖ್ಯವಾಗಿ, ಆಪಾದಿತನ ವಿರುದ್ಧ ಕೊಲೆ ಪ್ರಯತ್ನದ ಆರೋಪದ ಮೇಲೆ ಭಾರತೀಯ ದಂಡ ಸಂಹಿತೆಯ 307ನೇ ಕಲಂ ನಡಿ ಕೇಸನ್ನು ದಾಖಲಿಸಲಾಗಿತ್ತು. ತನಿಖೆಯ ಸಮಯದಲ್ಲಿ ಮತ್ತೆ ಮೂವರು ವ್ಯಕ್ತಿಗಳು ಈ ಹೀನ ಕೃತ್ಯದಲ್ಲಿ ಸಹಾಯಕರಾಗಿ / ಜೊತೆಗಾರರಾಗಿ ಕಂಡು ಬಂದಿದ್ದರಿಂದ ಅವರನ್ನೂ ಆರೋಪಿಗಳನ್ನಾಗಿ ಸೇರಿಸಲಾಗಿತ್ತು. ಈ ಘಟನೆಗೆ ಪ್ರತ್ಯಕ್ಷಸಾಕ್ಷಿಯಾದ ಸತೀಶ್ ಇಂಡಸ್ಟ್ರೀಸ್‌ನ ವಾಚ್‌ಮನ್ ಷಣ್ಮುಗಂನ ಹೇಳಿಕೆ ಹಸೀನಾಳ ಹೇಳಿಕೆಗೆ ಬಲವನ್ನು ಒದಗಿಸಿತು. ಹಸೀನಾ ತನ್ನ ಮೇಲೆ ಆ್ಯಸಿಡ್ ಹಾಕಿದ ವ್ಯಕ್ತಿಯ ಹೆಸರನ್ನು ಹೇಳಿದ್ದರಿಂದಾಗಿ ಅದೇ ದಿನ ರಾತ್ರಿ 8.35 ಗಂಟೆಗೆ ಏರ್‌ಫೋರ್ಸ್ ಸ್ಟೇಶನ್‌ನ ಚಿಮ್ನಿಹಿಲ್ಸ್‌ನಲ್ಲಿ ರೋಡ್ರಿಗ್ಸ್‌ನನ್ನು ಬಂಧಿಸಲಾಯಿತು. ಅವನ ಹೇಳಿಕೆಯ ಆಧಾರದ ಮೇಲೆ ಅವನು ಆ ಸಮಯದಲ್ಲಿ ಹಾಕಿಕೊಂಡಿದ್ದ ಬಟ್ಟೆಗಳು, ಮೋಟರ್ ಸೈಕಲ್, ಆ್ಯಸಿಡ್ ಬಾಟಲ್, ಆ್ಯಸಿಡ್ ಕೊಂಡ ಬಗ್ಗೆ ರಸೀದಿ ಇತ್ಯಾದಿಗಳನ್ನು ವಶಪಡಿಸಿಕೊಳ್ಳಲಾಯಿತು. ಅವನ ಕೈ ಮೇಲೂ ಸುಟ್ಟಗಾಯ-ವಿದ್ದುದರಿಂದಾಗಿ ಅವನನ್ನು ವೈದ್ಯಕೀಯ ಪರೀಕ್ಷೆಗೊಳಪಡಿಸಿ, ಚಿಕಿತ್ಸೆ ಕೊಡಿಸಲಾಯಿತು. ನಂತರ ನ್ಯಾಯಾಲಯಕ್ಕೆ ಆರೋಪ ಪಟ್ಟಿ ಸಲ್ಲಿಸಲಾಯಿತು.

ಬೆಂಗಳೂರಿನ ಸೆಷನ್ಸ್ ನ್ಯಾಯಾಲಯದಲ್ಲಿ ಮೊಕದ್ದಮೆಯ ವಿಚಾರಣೆ ನಡೆದು 28 ಸಾಕ್ಷಿದಾರರ ವಿಚಾರಣೆ ಮಾಡಲಾಯಿತು. ಆರೋಪಿ ಹಸೀನಾ ತನ್ನ ಮೇಲೆ ಸುಳ್ಳು ದೂರನ್ನು ಸಲ್ಲಿಸಿದ್ದಾಳೆಂದು ವಾದಿಸಿದ. ವಾದ-ವಿವಾದಗಳನ್ನು ಆಲಿಸಿದ ಸೆಷನ್ ನ್ಯಾಯಾಲಯ 6-5-2004ರಂದು (ಸುಮಾರು 5 ವರ್ಷಗಳ ನಂತರ) ತೀರ್ಪು ನೀಡಿ, ಆರೋಪಿ ರೋಡ್ರಿಗ್ಸ್ ಹಸೀನಾ ಮೇಲೆ ಆ್ಯಸಿಡ್ ಎರಚಿ ತೀವ್ರತರವಾದ ಗಾಯ ಉಂಟುಮಾಡಿದನೆಂದು ನಿರ್ಣಯಿಸಿದರೂ, ಆ ಕೃತ್ಯ ಕೊಲೆಯ ಪ್ರಯತ್ನದ ಅಪರಾಧ-ವಾಗುವುದಿಲ್ಲವೆಂದು ಆದರೆ ತೀವ್ರತರ ಘಾತ ಉಂಟು ಮಾಡಿದ ಅಪರಾಧ (ಭಾ. ದಂ. ಸಂ.ಯ 326ನೇ ಕಲಂ)ವಾಗುತ್ತದೆಂದು

ಹಾಗೂ ಅದರೊಂದಿಗೆ ಆಪಾದಿತ ಸಾಕ್ಷ್ಯ ಮುಚ್ಚಿಹಾಕಿದ ಅಪರಾಧ (ಭಾ. ದಂ. ಸಂ.ಯ 201ನೇ ಕಲಂ) ಮಾಡಿದ್ದಾನೆಂದು ನಿರ್ಣಯಿಸಿ ಅವನಿಗೆ 5 ವರ್ಷ 3 ತಿಂಗಳ ಜೈಲು ವಾಸದ ಶಿಕ್ಷೆ ಹಾಗೂ 3 ಲಕ್ಷ ರೂ.ಗಳ ದಂಡವನ್ನು ವಿಧಿಸಿತು. ಸೆರೆವಾಸದ ಶಿಕ್ಷೆ 5 ವರ್ಷ 3 ತಿಂಗಳೆಂದು ನಿರ್ಧರಿಸಲು ಕಾರಣ, ರೋಡ್ರಿಗ್ಸ್ ಈಗಾಗಲೇ ವಿಚಾರಣಾಧೀನ ಕೈದಿಯಾಗಿ ಆ ಅವಧಿಯಲ್ಲಿ ಜೈಲುವಾಸ ಅನುಭವಿಸಿದ್ದ ಎಂದರೆ ಅವನಿಗೆ ಬೇಲ್ ಸಿಕ್ಕಿರಲಿಲ್ಲ. ಒಟ್ಟಾರೆಯಾಗಿ ಈ ಶಿಕ್ಷೆಯ ಪರಿಣಾಮವೆಂದರೆ ಆರೋಪ ಸಾಬೀತಾಗಿ ತೀರ್ಪು ಹೊರಬಂದ ಕೂಡಲೇ ಆರೋಪಿ ಬಂಧಮುಕ್ತನಾಗಿ ಹೊರಬರುತ್ತಿದ್ದ. 326ನೇ ಕಲಂ ಕೆಳಗೆ ಜೀವಾವಧಿ ಶಿಕ್ಷೆ ಅಥವಾ 10 ವರ್ಷಗಳ ವರೆಗಿನ ಸೆರೆವಾಸದ ಶಿಕ್ಷೆ ವಿಧಿಸಲು ಅವಕಾಶವಿದ್ದರೂ ಕೆಳ ನ್ಯಾಯಾಲಯ ಅಪರಾಧಿ ವಿಚಾರಣಾಧೀನ ಕೈದಿಯಾಗಿ ಸೆರೆಯಲ್ಲಿದ್ದ ಕಾಲದವರೆಗೆ ಮಾತ್ರ ಶಿಕ್ಷೆ ವಿಧಿಸಿತ್ತು. ತನ್ನ ಮುಂದೆ ಬಂದು ನಿಂತಿರುತ್ತಿದ್ದ ಜೀವಚ್ಛವದಂತಿದ್ದ ಹಸೀನಾಳನ್ನು ನೋಡಿಯೂ ಕೆಳ ನ್ಯಾಯಾಲಯಕ್ಕೆ ಅಪರಾಧಿಯ ಬಗ್ಗೆ ಅಷ್ಟೇಕೆ ಮರುಕ ಉಂಟಾಯಿತೋ ಗೊತ್ತಿಲ್ಲ. ಉಳಿದ ಆಪಾದಿತರು ದೋಷಮುಕ್ತರಾಗಿ ಬಿಡುಗಡೆಯಾದರು.

ರೋಡ್ರಿಗ್ಸ್ ಈ ತೀರ್ಪನ್ನೂ ಪ್ರಶ್ನಿಸಿ ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಿದ. ರಾಜ್ಯ ಸರ್ಕಾರ ಕೂಡ ಶಿಕ್ಷೆಯನ್ನು ಹೆಚ್ಚಿಸಬೇಕೆಂದು ಹೇಳಿ ಅಪೀಲು ಸಲ್ಲಿಸಿತು. ಎರಡೂ ಪಕ್ಷದವರ ವಾದ-ವಿವಾದಗಳನ್ನು ಕೇಳಿದ ಉಚ್ಚ ನ್ಯಾಯಾಲಯ ದಿನಾಂಕ 22-8-2006ರಂದು (ಸುಮಾರು 2 ವರ್ಷಗಳ ನಂತರ) ತೀರ್ಪು ನೀಡಿ ರೋಡ್ರಿಗ್ಸ್‌ನ ಅಪೀಲನ್ನು ವಜಾ ಮಾಡಿತು ಹಾಗೂ ರಾಜ್ಯದ ಅಪೀಲನ್ನು ಪುರಸ್ಕರಿಸಿ ಅಪರಾಧಿಗೆ ಭಾ. ದಂ. ಸಂ.ಯ 307ನೇ ಪ್ರಕರಣದಡಿ (ಕೊಲೆಯ ಯತ್ನ) ಜೀವಾವಧಿ ಶಿಕ್ಷೆ ವಿಧಿಸಿತು ಹಾಗೂ ಈಗಾಗಲೇ ವಿಧಿಸಿದ 3 ಲಕ್ಷ ರೂಪಾಯಿಗಳ ದಂಡದೊಂದಿಗೆ ಮತ್ತೆ 2 ಲಕ್ಷ ರೂಪಾಯಿಗಳ ಪರಿಹಾರವನ್ನು ಹಸೀನಾಗೆ ಕೊಡಬೇಕೆಂದು ವಿಧಿಸಿತು. ಇಲ್ಲಿ ಜೀವಾವಧಿ ಶಿಕ್ಷೆ ಎಂದರೆ, ಇತ್ತೀಚೆಗೆ ಸರ್ವೋಚ್ಚ ನ್ಯಾಯಾಲಯ ತಿಳಿಸಿರುವಂತೆ ಜೀವವಿರುವವರೆಗೆ ಸೆರೆವಾಸ ಎಂದರ್ಥ.

ಇದೊಂದು ಚರಿತ್ರಾರ್ಹವಾದ ಮಹತ್ವದ ತೀರ್ಪು. ಇನ್ನೂ ಹಲವಾರು ಇಂತಹ ಆ್ಯಸಿಡ್ ಧಾಳಿಯ ಪ್ರಕರಣಗಳು ಬೇರೆ ಬೇರೆ ನ್ಯಾಯಾಲಯಗಳ ಮುಂದೆ ವಿಚಾರಣೆಯ ಹಂತದಲ್ಲಿವೆ. ಆ್ಯಸಿಡ್ ಧಾಳಿಗಾಗಿಯೇ ಪ್ರತ್ಯೇಕವಾದ ಕಲಂ ಹಾಗೂ ಶಿಕ್ಷೆ ಭಾರತೀಯ ದಂಡ ಸಂಹಿತೆಯಲ್ಲಿ ಇಲ್ಲವೆಂದು ಭಾವಿಸಿರುವ ಪೋಲೀಸರು ಈ ದೂರನ್ನು ಘಾತ ಉಂಟುಮಾಡುವುದು, ತೀವ್ರತರ ಘಾತ ಉಂಟುಮಾಡುವುದು ಎಂಬುದಾಗಿ ಕೆಳಮಟ್ಟದ ಅಪರಾಧಗಳಾಗಿ ಮೊಕದ್ದಮೆ ದಾಖಲು ಮಾಡುತ್ತಿದ್ದಾರೆ. ಈ ಹಸೀನಾ ಪ್ರಕರಣದಲ್ಲಿಯೇ ಹತ್ಯೆಯ ಯತ್ನದಂತಹ ಗಂಭೀರ ಆರೋಪಕ್ಕೆ ವಿಚಾರಣೆ ನಡೆದರೂ ಕೆಳ ನ್ಯಾಯಾಲಯ ಕೆಳಹಂತದ ಅಪರಾಧವಾಗಿ ಪರಿಗಣಿಸಿ ಕಡಿಮೆ ಶಿಕ್ಷೆ ವಿಧಿಸಿತ್ತು. ಇಂತಹ ಆ್ಯಸಿಡ್ ಧಾಳಿಗೆ ಗುರಿಯಾದ ಮಹಿಳೆ ತನ್ನೆಲ್ಲಾ ರೂಪವನ್ನು ಕಳೆದುಕೊಂಡು ವಿರೂಪಳಾಗಿ, ಜೀವಮಾನ ಪರ್ಯಂತ ನರಳುವ, ತನ್ನೆಲ್ಲಾ ಭವಿಷ್ಯವನ್ನು ಕಳೆದುಕೊಳ್ಳುವ, ಬೇರೆಯವರ ಮೇಲೆ ಅವಲಂಬಿಸಿ ಬಾಳಬೇಕಾದ ಕರುಣಾಜನಿಕ ಸ್ಥಿತಿಯಲ್ಲಿರಬೇಕಾದ, ಕನಿಷ್ಠ ಮಾನವ ಆಕೃತಿಯನ್ನು ಉಳಿಸಿಕೊಳ್ಳಲಾದರೂ ಪದೇ-ಪದೇ ಪ್ಲಾಸ್ಟಿಕ್ ಸರ್ಜರಿಗೆ ಒಳಗಾಗಬೇಕಾದ, ಅದಕ್ಕಾಗಿ ಲಕ್ಷಾಂತರ ರೂಪಾಯಿ ಖರ್ಚು ಮಾಡಬೇಕಾದ ಭಯಂಕರ ಪರಿಸ್ಥಿತಿಯಲ್ಲಿದ್ದರೂ ಆರೋಪಿ ಪುರುಷನ ಬಗ್ಗೆ ಏಕೆ ಈ ಸಹಾನುಭೂತಿಯೋ ಅರ್ಥವಾಗದು.

ಉಚ್ಚ ನ್ಯಾಯಾಲಯ ತನ್ನ ತೀರ್ಪಿನಲ್ಲಿ ನ್ಯಾಯದ ತಕ್ಕಡಿ ಏಕೆ ಇಂತಹ ದುರ್ಗತಿಗೆ ಒಳಗಾದ ಮಹಿಳೆಯ ಕಡೆಗೆ ವಾಲಬೇಕೆಂದು ಕಾರಣ ಕೊಟ್ಟಿದೆ. ಕೊಲೆಯ ಯತ್ನವಾಗಿ ಪರಿಗಣಿಸಿ ಇಂತಹ ಪ್ರಕರಣಗಳಿಗೆ ಕಠಿಣ ಶಿಕ್ಷೆ ವಿಧಿಸಬೇಕೆಂದು ತಿಳಿಸಿದೆ. ಅಂತಹ ಹೆಚ್ಚಿನ ಪ್ರಮಾಣದ ಸಲ್ಫೂರಿಕ್ ಆ್ಯಸಿಡ್‌ನ್ನು ಹಸೀನಾಳ ತಲೆಯ ಮೇಲೆ ಸುರಿದಾಗ ಅವನಿಗೆ ಅಂತಹ ಕೃತ್ಯದಿಂದ, ತಾನು ಉಪಯೋಗಿಸಿದ ಅಪಾಯಕಾರಿ ವಸ್ತುವಿನಿಂದ ಅವಳ ಮರಣ ಉಂಟಾಗಬಹುದೆಂಬುದರ ಕಲ್ಪನೆ ಇತ್ತು ಎಂಬುದಾಗಿ ಭಾವಿಸಬೇಕಾಗುತ್ತದೆ ಎಂದು ನ್ಯಾಯಾಲಯ ತೀರ್ಪಿತ್ತಿದೆ. ಇತ್ತೀಚೆಗೆ ಹೆಣ್ಣುಮಕ್ಕಳ ಮೇಲೆ ಇಂತಹ ಆ್ಯಸಿಡ್ ಧಾಳಿಗಳ ಪ್ರಕರಣಗಳು ಹೆಚ್ಚುತ್ತಿರುವುದನ್ನು ನ್ಯಾಯಾಲಯ ತನ್ನ ಗಮನಕ್ಕೆ ತಂದುಕೊಂಡು, ಇದರಿಂದ ಅವರಿಗೆ ಆಗುವ ಮಾನಸಿಕ, ದೈಹಿಕ ಆಘಾತವನ್ನು ಪರಿಗಣಿಸಿದೆ. ಹೆಚ್ಚಿನ ಪ್ರಕರಣಗಳಲ್ಲಿ ಆ್ಯಸಿಡ್ ಸುಟ್ಟಗಾಯದಿಂದಾಗಿ, ಸೆಪ್ಟಿಕ್‌ನಿಂದಾಗಿ ವ್ಯಕ್ತಿಗಳು ಮರಣ ಹೊಂದುತ್ತಾರೆ. ಅದೃಷ್ಟವಶಾತ್ ಬದುಕುಳಿದರೂ ಸುಟ್ಟು ಕರಕಾದ ಮಾಂಸಖಂಡ, ಭಯಾನಕ ಆಕಾರ-ರೂಪ ಹೊಂದಿ ಅವರತ್ತ ನೋಡಲೂ ಇತರರು ಭಯಪಡುವಂತಾಗುತ್ತದೆ ಎಂದು ಹೇಳಿದೆ.

ಹಸೀನಾ ತೀರ್ಪಿನ ಭಾಗವಾಗಿ ನ್ಯಾಯಾಲಯ ತನ್ನ ವಿಚಾರದ ಸಮರ್ಥನೆಗಾಗಿ ಈ ದುರ್ಘಟನೆ ನಡೆಯುವ ಮೊದಲಿನ ಹಸೀನಾಳ ಸುಂದರ ಭಾವಚಿತ್ರ ಮತ್ತು ನಂತರದ ಭಯಾನಕ ಭಾವಚಿತ್ರವನ್ನೂ ಪ್ರಕಟಿಸಿದೆ. ಹಸೀನಾಳ ಎರಡೂ ಕಣ್ಣುಗಳು ಕಳೆದಿವೆ. ಅವಳ ಕಿವಿ, ಮೂಗು, ಬಾಯಿ, ಹುಬ್ಬು ಇಲ್ಲವೇ ಇಲ್ಲ. ಅವಳು ಈಗಾಗಲೇ ಹಲವಾರು ಬಾರಿ ಪ್ಲಾಸ್ಟಿಕ್ ಸರ್ಜರಿಗೆ ಒಳಗಾಗಿದ್ದಾಳೆ. ಇನ್ನೂ ಹಲವಾರು ವರ್ಷ ಚಿಕಿತ್ಸೆಯ ಅವಶ್ಯಕತೆ ಇದೆ. ರಸ್ತೆಯಲ್ಲಿ ಸಾರ್ವಜನಿಕ ಸ್ಥಳದಲ್ಲಿ ಅವಳು ಕಾಣಿಸಿಕೊಳ್ಳುವಂತೆಯೇ ಇಲ್ಲ. ಮನೆಯ ನಾಲ್ಕು ಗೋಡೆಗಳ ನಡುವೆಯೇ ಅವಳ ಪ್ರಪಂಚ. ಅವಳನ್ನು ಆ ಸ್ಥಿತಿಯಲ್ಲಿ ಪ್ರತಿ ದಿನಾ ನೋಡಿ-ನೋಡಿ ಕಣ್ಣೀರನ್ನು ಖಾಲಿಮಾಡಿಕೊಂಡಿದ್ದಾರೆ ಅವಳ ತಂದೆ-ತಾಯಿ, ಮನೆಯವರು.

ಶಿಕ್ಷೆ ವಿಧಿಸುವ ಮೊದಲು ಶಿಕ್ಷೆಯ ಪ್ರಮಾಣದ ಬಗ್ಗೆ ಅಪರಾಧಿಯ ವಾದವನ್ನು ಕೇಳಿದಾಗ ಯಥಾಪ್ರಕಾರ ಅವನ ಚಿಕ್ಕ ವಯಸ್ಸು, ತಂದೆ-ತಾಯಿಯನ್ನು ಸಾಕಬೇಕಾದ ಅವನ ಜವಾಬ್ದಾರಿ, ಕಷ್ಟಪಟ್ಟು ನೌಕರಿ ಗಳಿಸಿಕೊಂಡಿದ್ದಾನೆ, ಅವನ ಭವಿಷ್ಯ ಹಾಳಾಗುತ್ತದೆ ಇತ್ಯಾದಿಯಾಗಿ ವಾದಿಸಲಾಯಿತು. ಮಹಿಳೆಯ ಮೇಲೆ ಹೀನ ಅತ್ಯಾಚಾರದ ಪ್ರಕರಣ ನಡೆದಾಗಲೂ ಈ ಕಾರಣಗಳ ಮೇಲೆ ನ್ಯಾಯಾಲಯ ಅನೇಕ ಪ್ರಕರಣಗಳಲ್ಲಿ ಆರೋಪಿಗಳಿಗೆ ಕಡಿಮೆ ಶಿಕ್ಷೆ ವಿಧಿಸಿದೆ. ಆರೋಪಿಗೆ ತೋರಿಸುವ ಸಹಾನುಭೂತಿಯ ಒಂದು ಅಂಶವನ್ನು ಆದಕ್ಕೆ ತುತ್ತಾದ ಮಹಿಳೆಯ ಬಗ್ಗೆ ತೋರಿಸಿಲ್ಲ. ಆದರೆ, ಹಸೀನಾ ಪ್ರಕರಣದಲ್ಲಿ ನ್ಯಾಯಾಲಯ ನ್ಯಾಯದಾನದ ಈ ತಪ್ಪು ನೀತಿಯನ್ನು ಸರಿಪಡಿಸಿದೆ. ಸಮಾಜ ಇಂತಹ ಅಪರಾಧಗಳ ಬಗ್ಗೆ, ಅಪರಾಧಿಗಳ ಬಗ್ಗೆ ಹೊಂದಿರುವ ಜಿಗುಪ್ಸೆ, ತಿರಸ್ಕಾರಕ್ಕೆ ಅನುಗುಣವಾಗಿ ನ್ಯಾಯಾಲಯಗಳು ಶಿಕ್ಷೆ ವಿಧಿಸುವುದೇ ನ್ಯಾಯದಾನ ಪ್ರಕ್ರಿಯೆಯ ನ್ಯಾಯೋಚಿತ ಪ್ರತಿಕ್ರಿಯೆ ಎಂದು ತಿಳಿಸಿದೆ. ಇನ್ನು ಚಿಕ್ಕ ವಯಸ್ಸಿನ ಆರೋಪಿಗೆ ಜೀವನದಲ್ಲಿ ಮುಂದುವರಿಯಲು ಅವಕಾಶಕೊಡಬೇಕೆಂದು ವಾದಕ್ಕೆ ಪ್ರತಿಯಾಗಿ, ಅಂತಹ ಹೀನಕೃತ್ಯಕ್ಕೆ ಬಲಿಯಾದ ಹಸೀನಾಗೆ ಇದರಿಂದ ಏನು ನ್ಯಾಯಸಿಕ್ಕಂತಾಯಿತು. ಮರಣಕ್ಕಿಂತ ಹೀನವಾಗಿ ಜೀವಿಸಬೇಕಾಗಿ ಬಂದಿರುವ ಹಸೀನಾಗೆ ಇದರಿಂದ ನ್ಯಾಯ ದೊರಕುತ್ತದೆಯೇ ಎಂದು ಪ್ರಶ್ನಿಸುತ್ತಾ, ಭಾವುಕವಾಗಿ ಇಂತಹ ಪ್ರಕರಣಗಳಲ್ಲಿ ''ಕಣ್ಣಿಗೆ ಕಣ್ಣು'' ಎನ್ನುವ ಹಳೆಯ ನ್ಯಾಯತತ್ತ್ವವೇ ಬಹುಶಃ ನ್ಯಾಯ ಸಮ್ಮತವೇನೋ ಎಂದು ಉದ್ಗಾರವೆತ್ತಿದರೂ, ಈಗಿನ ನಾಗರೀಕ ಸಮಾಜದಲ್ಲಿ ಅಂತಹ ಅನಾಗರಿಕ ಶಿಕ್ಷೆ ವಿಧಿಸಲಾಗದು, ಆದ್ದರಿಂದ ಇಂತಹ ಅಪರಾಧಕ್ಕೆ ಕಾನೂನಿನಡಿ ವಿಧಿಸಿರುವ ಅತ್ಯಂತ ಹೆಚ್ಚಿನ ಶಿಕ್ಷೆಯಾದ ಜೀವಾವಧಿ ಶಿಕ್ಷೆಯನ್ನು ವಿಧಿಸುತ್ತಿದ್ದೇವೆ ಎಂದು ನ್ಯಾಯಾಲಯ ತಿಳಿಸಿದೆ. ಕಣ್ಣಾರೆ ಇಂದಿನ ಹಸೀನಾಳನ್ನು ಕಂಡವರಿಗೆ ಯಾರಿಗೂ ಆ ಶಿಕ್ಷೆ ಅಸಮಂಜಸ ಎನಿಸಲಾರದು. ಬಹುಶಃ ಎಂತಹ ಕಠಿಣ ಶಿಕ್ಷೆಯೂ ಅಂತಹ ಅಪರಾಧಕ್ಕೆ ಸಮಾನವಲ್ಲ, ಆದರೂ, ಇಂತಹ ಕಠಿಣ ಶಿಕ್ಷೆಯಿಂದಲಾದರೂ ಇತರ ಅಪರಾಧಿ ಬುದ್ಧಿಯವರು ಪಾಠಕಲಿತು, ಅಂತಹ ಹೀನಕೃತ್ಯ ಮಾಡಲಾರರೆಂಬ ಒಂದು ಆಶಾಕಿರಣ ಈ ತೀರ್ಪಿನಿಂದ ಉಂಟಾಗಿದೆ. ನ್ಯಾಯಾಲಯಗಳಲ್ಲಿ ವಿಚಾರಣೆಯಲ್ಲಿರುವ ಇಂತಹ ಇತರ ಪ್ರಕರಣಗಳಿಗೂ ಈ ತೀರ್ಪು ಮಾರ್ಗದರ್ಶನವನ್ನು ಒದಗಿಸುತ್ತದೆ. ಯಾವು-ಯಾವುದೋ ಕಾರಣಗಳಿಗಾಗಿ ಅಪರಾಧಿಗಳಿಗೆ ಸಹಾನುಭೂತಿ ತೋರಿಸುವುದು ತಪ್ಪುತ್ತದೆ. ನ್ಯಾಯದಾನ ಪ್ರಕ್ರಿಯೆ ಇರುವುದು ಅಪರಾಧಕ್ಕೆ ತುತ್ತಾದ ವ್ಯಕ್ತಿಗಳ ರಕ್ಷಣೆ, ಸಹಾಯಕ್ಕಾಗಿಯೇ ಹೊರತು ಅಪರಾಧಿಗಳಿಗಾಗಿ ಅಲ್ಲ ಎನ್ನುವ ಕ್ರಿಮಿನಲ್ ನ್ಯಾಯಶಾಸ್ತ್ರದ ಹೊಸ ತತ್ತ್ವವನ್ನು ಈ ಪ್ರಕರಣ ಅನುಷ್ಠಾನಗೊಳಿಸಿದೆ. ಅಪರಾಧವನ್ನು ನ್ಯಾಯಾಲಯದಲ್ಲಿ ಸಾಕ್ಷ್ಯಾಧಾರಗಳ ಮೂಲಕ ಸಾಬೀತು ಪಡಿಸುವುದೇ ಒಂದು ಹರಸಾಹಸ, ಸಾಬೀತಾದ ಮೇಲೂ ಅಪರಾಧಿಗೇ ಸಹಾನುಭೂತಿಯ ಒಲವು ತೋರಿದರೆ ಫಿರ್ಯಾದಿಗೆ ಗಾಯದ ಮೇಲೆ ಬರೆ ಹಾಕಿದಂತಾಗುತ್ತದೆ, ಅಪರಾಧಕ್ಕೆ ಪ್ರೋತ್ಸಾಹ ದೊರೆತಂತಾಗುತ್ತದೆ.

ಈ ಪ್ರಕರಣ ಹಲವಾರು ದೃಷ್ಟಿಗಳಿಂದ ಐತಿಹಾಸಿಕವಾದುದು. ಆದರೆ, ತನ್ನ ಎಲ್ಲವನ್ನೂ ಕಳೆದುಕೊಂಡರೂ ಧೃತಿಗೆಡದೆ ಹಸೀನಾ ಕೊನೆಯವರೆಗೆ ಛಲದಿಂದ ಹೋರಾಡುತ್ತಾ ಬಂದುದು ಹೆಚ್ಚಿನ ಸಂಗತಿ. ಅವಳಿಗೆ ಈ ಹೋರಾಟದಲ್ಲಿ ಬೆಂಬಲ ನೀಡಿದವರು ಆ್ಯಸಿಡ್ ಧಾಳಿಯ ಪ್ರಕರಣಗಳ ವಿರುದ್ಧ ಹೋರಾಡುತ್ತಾ ಬಂದಿರುವ ಸಂಜನಾ, ಶೀಲಾ ರಾಮನಾಥ್, ಮತ್ತಿತರ ಸಹೋದರಿಯರು.

ಮತ್ತೊಂದು ಆಶಾದಾಯಕ ಸಂಗತಿಯೆಂದರೆ, ಈ ಅಪೀಲಿನಲ್ಲಿ ಈ ಸಹೋದರಿಯರು ಭಾಗವಹಿಸಿ, ಹಸೀನಾ-ಳಂತಹವರು ಪ್ಲಾಸ್ಟಿಕ್ ಸರ್ಜರಿಗಾಗಿ ಲಕ್ಷಾಂತರ ರೂಪಾಯಿ ಖರ್ಚುಮಾಡಬೇಕಾಗಿ ಬಂದುದನ್ನು ನ್ಯಾಯಾಲಯದ ಗಮನಕ್ಕೆ ತಂದು, ಅದನ್ನು ಭರಿಸಲು ಅವರಿಗೆ ಆರ್ಥಿಕ ಶಕ್ತಿ ಇಲ್ಲದಿರುವುದನ್ನು ಹಾಗೂ ಮುಂದೆ ಅವರ ಜೀವನ ನಡೆಸಲು ಆಧಾರವಿಲ್ಲದಿರುವುದನ್ನು ತಿಳಿಸಿದಾಗ ನ್ಯಾಯಾಲಯ ಈ ತೀರ್ಪಿನಲ್ಲಿಯೇ ರಾಜ್ಯ ಸರ್ಕಾರ ಪ್ರಜೆಗಳ ಬಗ್ಗೆ ಹೊಣೆಗಾರಿಕೆ ಹೊಂದಿರುವುದರಿಂದ ಆ್ಯಸಿಡ್ ಧಾಳಿಗೆ ತುತ್ತಾದವರಿಗೆ ವಿಶೇಷ ನೆರವನ್ನು ನೀಡಬೇಕೆಂದು ಮತ್ತು ಪುನರ್ವಸತಿಗೆ ಯೋಜನೆ ರೂಪಿಸಬೇಕೆಂದೂ ನಿರ್ದೇಶನ ನೀಡಿದೆ. ಇತ್ತೀಚಿನ ಪತ್ರಿಕಾ ವರದಿಯಂತೆ, ರಾಜ್ಯ ಸರ್ಕಾರದ ಆರೋಗ್ಯ ಮಂತ್ರಿಗಳಾದ ಶ್ರೀ ಅಶೋಕ್‌ರವರು ಮಾನ್ಯ ನ್ಯಾಯಾಧೀಶರನ್ನು ಭೇಟಿಯಾಗಿ ಈ ಬಗ್ಗೆ ತಕ್ಷಣ ಸೂಕ್ತ ಕ್ರಮ ಕೈಗೊಳ್ಳುವುದಾಗಿ ಭರವಸೆ ನೀಡಿದ್ದಾರೆ ಹಾಗೂ ಸರ್ಕಾರವೇ ಅಂತಹವರ ವೈದ್ಯಕೀಯ ಖರ್ಚನ್ನು ಭರಿಸುವುದಾಗಿ ವಾಗ್ದಾನ ನೀಡಿದ್ದಾರೆ. ಅದು ಅನುಷ್ಠಾನಕ್ಕೆ ಬಂದಲ್ಲಿ ಹಸೀನಾಳಂತಹ ಮಹಿಳೆಯರ ಬಲಿದಾನ ವ್ಯರ್ಥವಾಗುವುದಿಲ್ಲ. ಇಂತಹ ಆ್ಯಸಿಡ್ ಧಾಳಿ ಪ್ರಕರಣಗಳ ಬಗ್ಗೆ ಅಧ್ಯಯನ ನಡೆಸುತ್ತಾ, ಅವರಿಗೆ ಒತ್ತಾಸೆ ನೀಡುತ್ತಾ, ಹೋರಾಟ ಮಾಡುತ್ತಿರುವ ಸೋದರಿಯರ ಶ್ರಮ ಸಾರ್ಥಕವಾಗುತ್ತದೆ. ಹಸೀನಾಳ ಪ್ರಕರಣ 1999ರಲ್ಲಿ ದಾಖಲಾಗಿ ಉಚ್ಚ ನ್ಯಾಯಾಲಯದಲ್ಲಿ 2006ರಲ್ಲಿ ತೀರ್ಪು ಹೊರಬೀಳಲು 7 ವರ್ಷ ಕಾಲ ಬೇಕಾಯಿತು. ಇನ್ನು ಸರ್ವೋಚ್ಚ ನ್ಯಾಯಾಲಯದ ಮುಂದೆ ಅಪರಾಧಿ ಅಪೀಲು ಹಾಕಲು ಅವಕಾಶವಿದೆ. ಅದು ತೀರ್ಮಾನವಾಗುವುದು ಇನ್ನು ಎಷ್ಟು ವರ್ಷದ ನಂತರವೋ ? ವಿಳಂಬವಾಗಿ ಸಿಕ್ಕ ನ್ಯಾಯದಿಂದ ಯಾರಿಗೂ ಪ್ರಯೋಜನವಿಲ್ಲ, ಶಿಕ್ಷೆಯೂ ಪರಿಣಾಮಕಾರಿ-ಯಾಗುವುದಿಲ್ಲ. ಪ್ರಕರಣ ಎಲ್ಲರ ನೆನಪಿನಿಂದ ಮರೆಯಾಗುತ್ತದೆ. ಬಲಿಯಾದ ವ್ಯಕ್ತಿಗೆ ಏನೂ ಅನ್ನಿಸುವುದಿಲ್ಲ, ಬಹುಶಃ ಆರೋಪಿ ಅಲ್ಲಿಯವರೆಗೆ ಬೇಲ್ ಪಡೆದು ಹಸೀನಾಳ ಮನೆ ಮುಂದೆ ಓಡಾಡುತ್ತಿರುತ್ತಾನೆ.

◆

# ವಿವಾಹ - ವೈಧವ್ಯ - ವಾಟರ್

- ಶೈಲಜಾ ಹಿರೇಮಠ

'ವಾಟರ್' ಚಿತ್ರದಿಂದ ಸೃಷ್ಟಿಯಾದ ಬೆಂಕಿ ಹೊರಗಡೆ ಈಗ ತಣ್ಣಗಾಗಿರಬಹುದು. ಆದರೆ ನನ್ನೊಳಗೆ ಅದಿನ್ನೂ ನಿಗಿ ನಿಗಿ ಕೆಂಡವಾಗಿ ಧಗಧಗಿಸುತ್ತಿದೆ. ಬಾಲ್ಯದಲ್ಲಿ ನಾ ಕಂಡ ದೃಶ್ಯ ಪದೇ ಪದೇ ನನ್ನನ್ನು ಕಾಡುತ್ತಿದೆ. ನಾನಾಗ ಮಹಾಲಿಂಗಪುರದಲ್ಲಿ ಆರನೆಯ ತರಗತಿಯಲ್ಲಿ ಓದುತ್ತಿದ್ದೆ. ನನ್ನ ಸಹಪಾಠಿ ಪದ್ಮಾ ವೈದಿಕ ಪರಂಪರೆಗೆ ಸೇರಿದವಳು. ಅವಳ ಮನೆಗೆ ಒಂದೆರಡು ಬಾರಿ ಹೋಗಿದ್ದೆನು. ಎಪ್ಪತ್ತರ ಹರೆಯದ ಬೋಡು ತಲೆಯ ಸಣಕಲು ದೇಹದ ಅಜ್ಜಿಯೊಬ್ಬಳು ಮನೆಯವರೆಲ್ಲರ ಅಗತ್ಯಗಳನ್ನು ಪೂರೈಸುತ್ತ ಪುಟ ಪುಟ ಓಡಾಡುತ್ತಿದ್ದಳು. ಅವಳು ಕುಳಿತು ನಗುವುದನ್ನು, ಹರಟೆ ಹೊಡೆಯುವುದನ್ನು ನಾನು ಕಾಣಲೇ ಇಲ್ಲ. ಮನೆ ತುಂಬ ಯಂತ್ರದಂತೆ ಓಡಾಡಿಕೊಂಡು ಕೆಲಸ ಮಾಡಿ ಕೊಂಡಿದ್ದಳು. ಕಣ್ಣಲ್ಲಿ ನೋವನ್ನು ಬಚ್ಚಿಟ್ಟುಕೊಂಡ ಅವಳು ಜೀವಂತ ಹೆಣದಂತೆ ಕಾಣುತ್ತಿದ್ದಳು. ಏ ! ಬೋಳಿ ನನ್ನ ಸಾಕ್ಸ ಎಲ್ಲಿದೆ ? ಊಟಕ್ಕೆ ನೀಡು ಬಾ ರಂಡೆ, ಏಯ್ ಬೋಳಿ ನನ್ನ ತಲೆದಿಂಬು ಎಲ್ಲಿಟ್ಟಿರುವೆ ? ಎಂದು ಪ್ರತಿಯೊಂದಕ್ಕೂ ಕುಟುಂಬದ ಪ್ರತಿಯೊಬ್ಬ ಸದಸ್ಯರೂ ಕೇಳುತ್ತಿದ್ದರು. ಅದೇ ತಾನೆ ಮಾತು ಕಲಿಯುತ್ತಿರುವ ಮಗುವಿನಿಂದ ಹಿಡಿದು ಹಿರಿಯರವರೆಗೆ ಅವಳನ್ನು 'ಬೋಳಿ, 'ರಂಡೆ' ಎಂದೇ ಕರೆಯುತ್ತಿದ್ದರು. ಅವಳು ಅದಕ್ಕೆ ಎಷ್ಟು ನಿರ್ಲಿಪ್ತವಾಗಿ ಒಗ್ಗಿಕೊಂಡ್ಡಿದಳೆಂದರೆ ಹೆಸರು ಅಥವಾ ಸಂಬಂಧಗಳಿಂದ ಅಜ್ಜಿ, ಅತ್ತೆ ಎಂದು ಕೂಗಿ ಕರೆದರೆ ತಿರುಗಿಯೂ ನೋಡುತ್ತಿರಲಿಲ್ಲ. ಒಡಲಲ್ಲಿ ಅಪಮಾನ, ನೋವಿನ ಕೆಂಡವನ್ನು ಕಟ್ಟಿಕೊಂಡು ಹೊರಗಡೆ ತಣ್ಣಗೆ ಪ್ರತಿಕ್ರಿಯಿಸುತ್ತಿದ್ದ ಅವಳ ವರ್ತನೆ ಆ ಎಳೆವಯಸ್ಸಿನಲ್ಲಿಯೇ ನನ್ನನ್ನು ದಿಕ್ಕು ತಪ್ಪಿಸಿತ್ತು. ನನಗಾಗ ವೈಧವ್ಯದ ಪರಿಕಲ್ಪನೆಯೇ ಇರಲಿಲ್ಲ. ನಾನು ನನ್ನ ಅವ್ವ, ಅಪ್ಪನಿಗೆ ಆ ಅಜ್ಜಿಗೆ ತಲೆಯನ್ನು ಯಾಕೆ ಬೋಳಿಸಿದ್ದಾರೆ ? ಮಾತೆತ್ತಿದರೆ ಬೋಳಿ, ರಂಡೆ ಎಂದು ಆಕೆಯನ್ನು ಯಾಕೆ ಬೈಯುತ್ತಾರೆ ? ಎಂದು ಪದೇ ಪದೇ ಕಾಡಿ ಕೇಳಿದ್ದೆನು. ನನಗೆ ಅದನ್ನು ಅರ್ಥಮಾಡಿಸಲು ಸಾಕಷ್ಟು ಹೆಣಗಾಡಿದರು. ಕೊನೆಗೆ ಸೋತ ಅವರು ನನ್ನನ್ನೇ ಗದುರಿಸಿದರು, ಸುಮ್ಮನಾಗಿಸಿದರು. ಅವರ ಮನೆಗೆ ಹೋಗಕೂಡದು. ಇನ್ನೊಮ್ಮೆ ಅಂಥ ಪ್ರಶ್ನೆಗಳನ್ನು ಕೇಳಕೂಡದು ಎಂಬುದು, ಅವರ ಕಟ್ಟಾಜ್ಞೆ, ಈಗಲೂ ಆ ಅಜ್ಜಿ ನನ್ನೊಳಗೆ ಜೀವಂತವಾಗಿದ್ದಾಳೆ. ಅವಳ ತಣ್ಣನೆಯ ನೋಟ ನಿತ್ಯವೂ ನನ್ನನ್ನು ಸುಡುತ್ತದೆ.

ಇಂದು, ದೇಶದಲ್ಲಿ ಫ್ಯಾಸಿಸ್ಟ್ ಶಕ್ತಿಗಳು ರಾಜಕೀಯ ಪಕ್ಷವನ್ನು ಆಳುತ್ತಿವೆ. ಹಿಂದೂ ಸಮಾಜದ ರೂವಾರಿ ಎಂಬಂತೆ ಅವರು ವರ್ತಿಸುತ್ತಿದ್ದಾರೆ. ಮತ್ತು ಹಿಂದೂ ಸಮಾಜ, ಹಿಂದೂ ಸಂಸ್ಕೃತಿಯನ್ನು ತಮಗನುಕೂಲವಾಗುವ ನೆಲೆಯಲ್ಲಿ ನಿರ್ವಚಿಸುತ್ತಿದ್ದಾರೆ. ಇಂಥವರ ಮಧ್ಯದಲ್ಲಿದ್ದುಕೊಂಡು ಸಮಾಜದಲ್ಲಿಯ ಕ್ರೂರವಾಸ್ತವ ಸತ್ಯವನ್ನು ಹೇಗೆ ಎದುರಿಸಬೇಕೆಂಬ ಸವಾಲು ನಮ್ಮೆಲ್ಲರೆದುರಿಗಿದೆ. ಇಂಥ ಸಂದರ್ಭದಲ್ಲಿ ಪ್ರಜ್ಞಾವಂತರೆನಿಸಿ ಕೊಂಡವರು ಮೌನದಿಂದಿರು-ವುದು ಆರೋಗ್ಯಕರವಲ್ಲ. ಅಪರಾಧ ಮಾಡುವುದಕ್ಕಿಂತಲೂ, ಅಪರಾಧವನ್ನು ಸಹಿಸುವುದು ಮಹಾಪರಾಧ ಎನ್ನುವುದನ್ನು ಮರೆಯಬಾರದು. ಅದಕ್ಕಾಗಿ ಮೌನ ಮುರಿದು ಮಾತನಾಡಬೇಕು. ವಾಟರ್ ಚಿತ್ರದಲ್ಲಿ ಹಿಂದೂ ಸಂಸ್ಕೃತಿಯನ್ನು, ವಿಧವೆಯರನ್ನು, ವಾರಣಾಸಿಯನ್ನು ಅತ್ಯಂತ ಕಳಪೆಯಾಗಿ ತೋರಿಸಲಾಗಿದೆ, ಅಪಮಾನಿಸಲಾಗಿದೆ ಎಂಬುದು ಈ ಎಲ್ಲ ಕೋಮುವಾದಿ ಶಕ್ತಿಗಳ ಆರೋಪ. ಇವರೆಲ್ಲರೂ ಸೇರಿಕೊಂಡು 65 ವರ್ಷವಯಸ್ಸಿನ ವೃದ್ಧ ವಿಧವೆಯಿಂದ ಎನ್ನುವ ಫಲಕ ಪ್ರದರ್ಶಿಸುವುದು, ನಾಡಿನ ಅನೇಕ ಪತ್ರಿಕೆಗಳು ಅದಕ್ಕೆ ಪ್ರಚಾರ ನೀಡಿರುವುದು ಈ ಶತಮಾನದ ದೊಡ್ಡ ತಮಾಷೆಯಂತೆ ಕಾಣುತ್ತದೆ.

ಒಂದು ಕಾದಂಬರಿಯೇ ವಾಟರ್ ಚಿತ್ರಕ್ಕೆ ಆಧಾರ. 1930ರಲ್ಲಿ ಪ್ರಚಲಿತದಲ್ಲಿದ್ದ ವಿಧವೆಯರ ಬದುಕಿನ ಚಿತ್ರಣವೇ ಇದರ ಕಥಾವಸ್ತು. ಚಿತ್ರದಲ್ಲಿ ಇದೆ ಎನ್ನಲಾದ ಎರಡು ಸಂಭಾಷಣೆಗಳನ್ನು ಕುರಿತಂತೆ ಸಂಸ್ಕೃತಿ ಸುರಕ್ಷಾ ಸಂಘವು ತೀವ್ರವಾದ ವಿರೋಧವನ್ನು ವ್ಯಕ್ತಪಡಿಸಿದೆ. ಅದರಲ್ಲಿ ಒಂದು ಮಧುಮತಿ ಹೇಳಿದ್ದು ಮತ್ತೊಂದು ಶುಕುಂತಲೆ ಮತ್ತು ಪಂಡಿತನ ನಡುವಿನ ಸಂಭಾಷಣೆ.

ಮಧುಮತಿ : ಇಲ್ಲಿ ಸೂಳೆಗೂ ವಿಧವೆಗೂ ವ್ಯತ್ಯಾಸವೇ ಇಲ್ಲ.

ಶಕುಂತಲೆ : ಪಂಡಿತರೇ ಹಿಂದೂಧರ್ಮದ ಗ್ರಂಥಗಳನ್ನೆಲ್ಲಾ ಓದಿದ್ದೀರಾ ? ಅವುಗಳು ವಿಧವೆಯ ಕುರಿತಂತೆ ಏನು ಮಾತನಾಡುತ್ತವೆ ? ಅವರನ್ನು ಕ್ರೂರವಾಗಿ ನಡೆಸಿಕೊಳ್ಳಬೇಕು ಎಂದೇನಾದರೂ ಹೇಳಿದೆಯಾ ?

ಪಂಡಿತ : ಹಿಂದೂ ಧರ್ಮವು ವಿಧವೆಯರಿಗೆ ಸೂಚಿಸಿರುವುದು ಎರಡು ದಾರಿಗಳನ್ನು ಮಾತ್ರ. ಬದುಕಿದರೆ ಅಲೌಕಿಕವಾಗಿ ಬದುಕಬೇಕು, ಇಲ್ಲದಿದ್ದರೆ ಗಂಡನ ಜೊತೆ ಚಿತೆಯೇರಬೇಕು.

ಇಂತಹ ಹೇಳಿಕೆಗಳು ಹಿಂದೂ ಸಂಸ್ಕೃತಿಗೆ ಧಕ್ಕೆಯನ್ನುಂಟು ಮಾಡುತ್ತವೆ ಎಂಬುದು ಫ್ಯಾಸಿಸ್ಟ್ ಶಕ್ತಿಗಳ ಅಬ್ಬರ. ಹಿಂದೂ ಸಂಸ್ಕೃತಿ ಎನ್ನುವುದು ಇದೆಯೇ ? ಹಾಗೂ ಯಾವುದನ್ನು ಹಿಂದೂ ಸಂಸ್ಕೃತಿಯೆಂದು ಕರೆಯಬೇಕು ಎಂಬುದನ್ನು ಮೊದಲು ಸ್ಪಷ್ಟಪಡಿಸಿಕೊಳ್ಳಬೇಕು. ಇಲ್ಲದಿದ್ದರೆ ಇಂತಹ ಅಪಾಯಕಾರಿ ಫ್ಯಾಸಿಸ್ಟ್ ಶಕ್ತಿಗಳು ಕಟ್ಟಿಕೊಟ್ಟದ್ದೇ ಸಂಸ್ಕೃತಿಯಾಗಿ ನಿಲ್ಲುತ್ತದೆ. ವೈದಿಕ ಮೂಲದ ಸಂಗತಿಗಳನ್ನೇ ಭಾರತೀಯ ಸಂಸ್ಕೃತಿ, ಹಿಂದೂ

ಸಂಸ್ಕೃತಿ ಎಂದು ಬಿಟ್ಟಿ ಪ್ರಚಾರ ನೀಡುತ್ತಿದ್ದಾರೆ. ಒಂದು ಜನ ಸಮುದಾಯದ ಸಂಸ್ಕೃತಿ ಇಡೀ ದೇಶದ ಸಂಸ್ಕೃತಿಯಾಗಿ ನಿಲ್ಲಲು ಹೇಗೆ ಸಾಧ್ಯ ? ಭಾರತದಲ್ಲಿ ಹಲವಾರು ಧರ್ಮಗಳಿವೆ. ನೂರಾರು ಜಾತಿಗಳಿವೆ. ಹಾಗಿದ್ದರೆ ಇವುಗಳು ಯಾವ ಸಂಸ್ಕೃತಿಯ ಪಟ್ಟಿಗೆ ಸೇರುತ್ತವೆ ? ಎಲ್ಲ ಧರ್ಮ, ಜಾತಿಯವರನ್ನು ಕೈಬಿಟ್ಟು ವೈದಿಕ ಸಂಸ್ಕೃತಿಯನ್ನು ಹಿಂದೂ ಸಂಸ್ಕೃತಿಯೆಂದು ಕರೆಯುವುದರ ಔಚಿತ್ಯವನ್ನು ಅದರ ಹಿಂದಿನ ರಾಜಕಾರಣವನ್ನು ಪ್ರಶ್ನಿಸಬೇಕಿದೆ. ಹಿಂದೂ ಸಂಸ್ಕೃತಿಗೆ ಧಕ್ಕೆಯಾಗುತ್ತದೆ ಎಂದು ಅಬ್ಬರಿಸುವ ಆ ಶಕ್ತಿಗಳು ಮೊದಲು ಸರಿಯಾದ ನೆಲೆಯಲ್ಲಿ ಸಂಸ್ಕೃತಿಯನ್ನು ನಿರ್ವಚಿಸಿಕೊಳ್ಳಲಿ. ಸಂಸ್ಕೃತಿ ಯಾವಾಗಲೂ ಜೀವಪರ-ವಾಗಿರಬೇಕು. ಜೀವ ವಿರೋಧಿಯಾದ ಯಾವ ಸಂಗತಿಗಳೂ ಸಂಸ್ಕೃತಿಯಾಗಿ ನಿಲ್ಲುವುದಿಲ್ಲ. ಅಂಥದ್ದನ್ನು ಸಂಸ್ಕೃತಿಯಾಗಿ ಪರಿಗಣಿಸಲೂ ಬಾರದು. 'ವಾಟರ್' ಚಿತ್ರದಲ್ಲಿಯ ಮಧುಮತಿಯ ಮಾತಿಗಾಗಿ ಅವರು ನೊಂದುಕೊಳ್ಳಬೇಕಾಗಿಲ್ಲ. ಅಥವಾ ಅದನ್ನು ಅಪಮಾನವಾಗಿ ಸ್ವೀಕರಿಸಬೇಕಾಗಿಲ್ಲ. ವಾಸ್ತವದಲ್ಲಿ ಭಾರತದಲ್ಲಿಯ ಅನೇಕ ವಿಧವೆಯರು ಅದೇ ಬದುಕನ್ನು ಸಾಗಿಸುತ್ತಿದ್ದಾರೆ. ಹಿಂದೆಯೂ ಅದೇ ರೂಪದಲ್ಲಿ ಬದುಕಿದ್ದರು ಎನ್ನುವುದಕ್ಕೆ ಸಾಹಿತ್ಯಿಕ ಹಾಗೂ ವಿದೇಶಿ ಪ್ರವಾಸಿಗರ ಪತ್ರಗಳ ಉಲ್ಲೇಖಗಳು ಜೀವಂತ ಸಾಕ್ಷಿಯಾಗಿವೆ. ವಿನುಕೊಂಡ ವಲ್ಲಭರಾಯ ವಿರಚಿತ ಕ್ರೀಡಾಭಿರಾಮದಲ್ಲಿ ಉಲ್ಲೇಖಿತರಾದ ವಿಪ್ರನ ವಿಧವೆಯರ ಚಿತ್ರಣ ಗಮನಾರ್ಹವಾದುದು. 14ನೆ ಶತಮಾನದಲ್ಲಿದ್ದ ವಲ್ಲಭರಾಯನು ಅಂದಿನ ಸಾಂಸ್ಕೃತಿಕ ಹಾಗೂ ಸಾಮಾಜಿಕ ವ್ಯವಸ್ಥೆಯ ಜೀವಂತ ಚಿತ್ರಣವನ್ನು ನೀಡಿದ್ದಾನೆ. ಊಟದ ಮನೆಯ ಬಗ್ಗೆ ವಿಚಾರಿಸಿದ ಮಂಚನನಿಗೆ ಬ್ರಾಹ್ಮಣನು 'ನಿಮಗೆ ಆಹಾರ ಬೇಕೊ ? ವಿಹಾರ ಬೇಕೊ ?' ಎಂದು ಪ್ರಶ್ನಿಸುತ್ತಾ ವಿಹಾರದ ಕುರಿತು ಈ ಕೆಳಗಿನಂತೆ ವಿವರಣೆ ನೀಡುತ್ತಾನೆ.

''ಸಣ್ಣದೇಹ ದೊಡ್ಡಸ್ತನ, ಹೊಳೆಯುವ ಕಣ್ಣು, ಕೂದಲಿಲ್ಲದ ತಲೆ ಆ ವಿಧವಾ ರತ್ನವನ್ನು ಸ್ವೇಚ್ಛೆಯಾಗಿ ಬಿಟ್ಟ ಬ್ರಹ್ಮನಿಗೆ ಜಯಜಯ. ವಿಪ್ರ ವಿಧವೆಯರು ಈ ಭೂಮಂಡಲದಲ್ಲಿ ಎಷ್ಟು ಜನ ಇಲ್ಲ ! ಆದರೆ ಆಕೆಯ ವಿಭ್ರಮ ! ವಿಲಾಸ ! ಕಲಾವರ್ಗ ! ಇವೆಲ್ಲ ಹಾಗಿರಲಿ. ಆ ವಿಧವೆಯ ದೇಹಾಕಂತಿಯ ನವಲಕ್ಷಾಧೀಶನ ಹಣೆಯಲ್ಲಿರುವ ಚಿನ್ನದ ಪಟಬಂಧನ ಸೌಭಾಗ್ಯಲಕ್ಷ್ಮಿಯನ್ನು ನೋಡಿ ನಗುವಂತಿದೆ'' (ವಿನುಕೊಂಡ ವಲ್ಲಭರಾಯ ವಿರಚಿತ-ಕ್ರೀಡಾಭಿರಾಮ, ತೆಲುಗಿನಿಂದ ಕನ್ನಡಕ್ಕೆ : ಆರ್ವಿಯಸ್. ಸುಂದರಂ.)

ಬ್ರಾಹ್ಮಣನ ಈ ಮಾತಿನ ಅರ್ಥವನ್ನು ಬಿಚ್ಚಿ ಹೇಳಬೇಕಾಗಿಲ್ಲ. ವಿಧವೆಯರಿಗೆ ಲೈಂಗಿಕ ನಿರ್ಬಂಧವೇನಿರಲಿಲ್ಲ. ತಮಗೆ ಬೇಕಾದ ಗಂಡಸರನ್ನು ಕೂಡಿಕೊಳ್ಳುವ ಸ್ವಾತಂತ್ರ್ಯ ಅವರಿಗಿತ್ತು. ಅಂದಿನ ಸಮಾಜದಲ್ಲಿ ಅದು ಅನೈತಿಕ ಸ್ವರೂಪವನ್ನು ಪಡೆದುಕೊಂಡಿರಲಿಲ್ಲ. ಅದೊಂದು ಒಪ್ಪಿತ ಸಾಮಾಜಿಕ ಮೌಲ್ಯವಾಗಿತ್ತು.

ವಲ್ಲಭರಾಯನ ಅದೇ ಕೃತಿಯಲ್ಲಿ ವಿಧವೆಯರ ಲೈಂಗಿಕ ಸ್ವಾತಂತ್ರ್ಯದ ಕುರಿತಂತೆ ಮತ್ತೊಂದು ಉಲ್ಲೇಖ ಸಿಗುತ್ತದೆ. ಅದಕ್ಕೆ ಸಾಂಸ್ಕೃತಿಕ ಸ್ವರೂಪದ ಕವಚವಿದೆ. ಶ್ರೀ ಕಾಕುಳೇಶ್ವರ ಉತ್ಸವದಲ್ಲಿ ಗರುಡಗಂಭವನ್ನು ಪ್ರತಿಷ್ಠಾಪಿಸುವ ದಿನದಂದು ಹಿಡಿದುಕೊಂಡು ಪುಷ್ಪಯಾಗದವರೆಗಿನ ಪರ್ವಕಾಲದವರೆಗೆ ವಿಧವೆಯರು ಲೈಂಗಿಕ ಸ್ವಾತಂತ್ರ್ಯವನ್ನು ಹೊಂದಿರುತ್ತಿದ್ದರು. ಈ ಅವಧಿಯಲ್ಲಿ ತಮ್ಮ ಲೈಂಗಿಕ ಅಗತ್ಯವನ್ನು ಪೂರೈಸಿಕೊಳ್ಳುವುದು ಅವರ ಹಕ್ಕೂ ಆಗಿತ್ತು. ಕೃತಿಕಾರ ಈ ಆಚರಣೆಯ ಇಡಿಯಾದ ವರ್ಣನೆಯನ್ನು ಮಂಚನನ ಮೂಲಕ ಹೇಳಿಸುತ್ತಾನೆ.

''ದವನ ಹುಣ್ಣಿಮೆ ದಿನ ಶ್ರೀಕಾಕುಳದಲ್ಲಿರುವ ತೆಲುಗುರಾಯನೆಂಬ ಹೆಸರಿನ ದೇವತಾಧೀಶ್ವರನಿಗೆ ಲೋಕ ಹಿತಕ್ಕಾಗಿ ಉತ್ಸವ ಮಾಡಿದರು. ನಾವು ಕಳೆದ ವರ್ಷ ಅಲ್ಲಿಗೆ ಹೋಗಿದ್ದೆವು. ಕಲ್ಪವಲ್ಲಿಯಾದ ಕಾರವೆಲ್ಲಿ ತಾಯಿ ಪ್ರೀತಿಯಿಂದ ಹೆತ್ತ ಮಗು ಅವನು ಆ ತೆಲುಗರಾಯ ಜಾರಚೋರ ಧೂರ್ತ ಚಕ್ರವರ್ತಿ ದೇವವೇಶ್ಯಾಭುಜಂಗ. ಅವನು ಚಿನ್ನದ ಪಾತ್ರೆಯಲ್ಲಿ ಬಿಸಿಹಾಲನ್ನು ಕುಡಿದು ಹುಳಿಯಾದ ತನ್ನ ಅಧರ ಪಲ್ಲವದಿಂದ ವಿಪ್ರಕನ್ಯೆಯರೊಂದಿಗೆ ಸರಸವಾಡುತ್ತಿದ್ದಾನೆ.

ನಾಗದೇವ ಭಟ್ಟಾರಕನ ಮನೆಯಲ್ಲಿ ಹುಟ್ಟಿದ ಶ್ರೀ ಕಾಕುಳೇಶ್ವರನ ಉತ್ಸವವನ್ನು ಆಚರಿಸುವಾಗ ವೇದ ಪುರಾಣ, ಉಪನಿಷತ್ತುಗಳು ಇಷ್ಟವಾಗುವುದಿಲ್ಲ. ಆಗಮಗಳು ಬೇಡವೆನಿಸುತ್ತವೆ. ಗರುಡಗಂಬವನ್ನು ಪ್ರತಿಷ್ಠಾಪಿಸುವ ದಿನ ಮೊದಲುಗೊಂಡು ಪುಷ್ಪಯಾಗದವರೆಗಿನ ಪರ್ವಕಾಲದಲ್ಲಿ ಕೃಷ್ಣಾನದಿ ತೀರದ ಹನ್ನೆರಡು ಕ್ರೋಶ ವ್ಯಾಪಕ ಭೂಮಿಯಲ್ಲೆಲ್ಲ ಭಗವದನು ಮತಿಯಿಂದ ಪರನಾಗಿ ಸಂಗ ಮಾಡುವುದು ಪಾಪವಲ್ಲ. ಶ್ರೀ ಕಾಕುಳದ ಜಾತ್ರೆಗೆ ಬರುವ ಕಾಮಾಂಧರಾದ ವೆಲನಾಡಿನ ತರುಣ ವಿಧವೆಯರನ್ನು ತೃಪ್ತಿಗೊಳಿಸಲು ಉಗ್ರಕಾಮಶಕ್ತಿಯುಳ್ಳ ಭೀಮಸೇನನಂಥ ಹಿಡಿಂಬಾಧೀಶ್ವರರು ಬೇಕಷ್ಟೇ. ಅವರನ್ನು ಬೇರೆಯವರಿಂದ ತಣಿಸಲು ಸಾಧ್ಯವಿಲ್ಲ.

ಯುವಕರು ಈ ಜಾತ್ರೆಯಲ್ಲಿ ಯುವತಿಯರಿಗೆ ಮುತ್ತಿಡುವುದು, ಅಪ್ಪಿಕೊಳ್ಳುವುದು, ನದೀತೀರಕ್ಕೆ ಅವರನ್ನು ಎಳೆದುಕೊಂಡು ಹೋಗುವುದು ಸರ್ವೆಸಾಮಾನ್ಯ. ಶ್ರೀ ಕಾಕುಳ ಉತ್ಸವದಲ್ಲಿ ಸೌಂದರ್ಯವತಿಯರಾದ ವಿಧವೆಯರು ಎಷ್ಟೋ ಜನ ಸಿಕ್ಕುವಾಗ ವೇಶ್ಯೆಯರನ್ನು ಹುಡುಕಿಕೊಂಡು ಹೋಗುವುದೇಕೆ ? ಅಲ್ಲಿ ಕಾಮನು ಯುವತಿಯನ್ನು ನೋಡಿದ ಸನ್ಯಾಸಿಯ ಮೇಲೆ ದರ್ಭವಲ್ಲವದ ಕತ್ತಿಯನ್ನು ಝಳಪಿಸುತ್ತಾನೆ. ಮೇದರ ಕನ್ಯೆಯನ್ನು ನೋಡಿದ ರೈತನನ್ನು ಮುಳ್ಳುಗೋಲಿನಿಂದ ಚುಚ್ಚುತ್ತಾನೆ. ಅಕ್ಕಸಾಲಿಗನನ್ನು ನೋಡಿದ ತರುಣಿಯ ಮೇಲೆ ಪುಷ್ಪಾಗ್ನಿ ಬಾಣ ಬಿಡುತ್ತಾನೆ. ಹೀಗೆ ಒಂದೊಂದು ಜಾತಿಗೆ ತಕ್ಕಂತೆ ಜಾತ್ರೆಯ ಎಲ್ಲಾ ದಿನಗಳಲ್ಲೂ ಮನ್ಮಥನು ಸರಿಯಾದ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತಾನೆ ಎಂದು ಹೇಳಿ ಆ ಕಡೆ ಬರುತ್ತಿದ್ದ ವಿಧವಾ ಸಮೂಹವನ್ನು ಆಶೀರ್ವದಿಸಲು ಮುಂದೆ ಹೋಗಿ :

ಅಂದವಾಗಿ ಸಣ್ಣ ಸೀರೆ ಉಟ್ಟು ತಿರುಗಾಡುವ ಮಾಚಕಮ್ಮನಿಗೆ ದೀರ್ಘಾಯುರಸ್ತು ! ಮತ್ತೆ-ಮತ್ತೆ ದೇವಾಲಯಕ್ಕೆ ಹೋಗುವ ಕುಲಟಿಗೆ ಸಂಕಲ್ಪಸಿದ್ಧಿರಸ್ತು! ನಿತ್ಯವೂ ವ್ಯಭಿಚಾರ ನಿಷ್ಠೆಯಿಂದಿರುವ ವಿಧವೆಗೆ ಪುತ್ರಾಭಿವೃದ್ಧಿ ಪ್ರಾಪ್ತಿರಸ್ತು ! ತುಲಸಿಮಾಲೆಯನ್ನು ಧರಿಸಿರುವವಳಿಗೆ ಆರೋಗ್ಯ ವಿಭವಮಸ್ತು ! ವಿಧವೆಗೆ ಸಂಪತ್ಸಮೃದ್ಧಿರಸ್ತು ! ತಿರುಗಾಡುವ ಹೆಣ್ಣಿಗೆ ನಿತ್ಯ ಸೌಭಾಗ್ಯಮಸ್ತು.....!

ಪ್ರವಾಸಿಕಂಡ ಇಂಡಿಯಾದಲ್ಲಿ ಭಿನ್ನ ರೀತಿಯ ಅನೇಕ ಉಲ್ಲೇಖಗಳು ದೊರೆಯುತ್ತವೆ. ದುಆರ್ತೆ ಬಾರ್ಬೊಸಾನು - "ಸಹಗಮನ ಮಾಡದ ಹೆಂಗಸರನ್ನು ಬಹಳ ಅಗೌರವದಿಂದ ಕಾಣುತ್ತಾರೆ. ಅವರ ತಲೆಯನ್ನು ಬೋಳಿಸಿ ಮನೆತನಕ್ಕೆ ಅಮಂಗಳ, ಅಗೌರವವೆಂದು ಹೊರಗಟ್ಟುತ್ತಾರೆ. ಹೀಗೆ ಮನೆಯಿಂದ ಅಟ್ಟಲ್ಪಟ್ಟ ವಿಧವೆಯರು ದಿಕ್ಕಿಲ್ಲದೆ ಅಲೆಯುತ್ತಾರೆ. ಅತಿ ಚಿಕ್ಕ ವಯಸ್ಸಿನ ವಿಧವೆಯರ ಬಗ್ಗೆ ದಯಾದಾಕ್ಷಿಣ್ಯ ತೋರಿಸಿದ ಪಕ್ಷದಲ್ಲಿ ಅವರನ್ನು ದೇವಸ್ಥಾನಗಳಿಗೆ ಕಳುಹಿಸಿ ಅಲ್ಲಿ ದೇವಸ್ಥಾನಕ್ಕಾಗಿ ಹಣಗಳಿಸಲು ದೇವದಾಸಿಯರಾಗಿ ಬಿಡುತ್ತಾರೆ" (ಸಂ. ಎಚ್.ಎಲ್. ನಾಗೇಗೌಡ, ಪ್ರವಾಸಿಕಂಡ ಇಂಡಿಯಾ, ಪು. 296-97).

ಸಾಹಿತ್ಯದಲ್ಲಿ, ವಿದೇಶಿ ಪ್ರವಾಸಿಗರ ಪತ್ರಗಳಲ್ಲಿ ಉಲ್ಲೇಖಿತವಾದ ಇಂತಹ ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂಗತಿಗಳನ್ನು ಯಾರೂ ಅಪಮಾನವೆಂದು ಸ್ವೀಕರಿಸಬಾರದು. ಚರಿತ್ರೆಯಲ್ಲಿಯ ಇಂತಹ ಸತ್ಯಗಳನ್ನು ಅರ್ಥಮಾಡಿಕೊಳ್ಳಬೇಕು. ಅರಗಿಸಿಕೊಳ್ಳಬೇಕು. ಅಂತಹ ತಪ್ಪುಗಳು ಮುಂದೆ ಜರುಗದಂತೆ ನೋಡಿಕೊಳ್ಳಬೇಕು. ಯಾವುದೇ ಸಾಂಸ್ಕೃತಿಕ ಸಂಗತಿಗಳ ಅಧ್ಯಯನದ ಸಂದರ್ಭದಲ್ಲಿ ಚರಿತ್ರೆಯ ಪುನರಾವಲೋಕನ ಅತ್ಯಗತ್ಯವಾದುದು. ಮೇಲೆ ನೀಡಿದ ಮೊದಲ ಮತ್ತು ಎರಡನೆಯ ಉಲ್ಲೇಖಗಳು ತೆಲುಗು ನಾಡಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರದಲ್ಲಿ ಪ್ರಚಲಿತದಲ್ಲಿದ್ದವುಗಳೇ ಆಗಿರಬೇಕು. ಇಲ್ಲದೆ ಹೋಗಿದ್ದರೆ ಕೃತಿಕಾರನಿಗೆ ಧಾರ್ಮಿಕ ಮುಂಚೂಣಿಯಲ್ಲಿದ್ದ ವೈದಿಕರ ಕುರಿತಂತೆ ಈ ರೀತಿಯ ಚಿತ್ರಣ ನೀಡುವುದು ಸಾಧ್ಯವಾಗುತ್ತಿರಲಿಲ್ಲ. 14ನೆಯ ಶತಮಾನದಲ್ಲಿ ಕೃಷ್ಣಾನದಿಯ ತೀರದಲ್ಲಿ ಇಂತಹ ಆಚರಣೆಗಳು ಸಮಾಜ ಒಪ್ಪಿತ ಮೌಲ್ಯಗಳೇ ಆಗಿದ್ದವು. ವೈದಿಕ ಸಂಸ್ಕೃತಿಯಿರಬಹುದು, ಅವೈದಿಕ ಸಂಸ್ಕೃತಿಯಿರಬಹುದು. ಅವುಗಳಲ್ಲಿ ಕೃತಕ ಹಾಗೂ ಸಹಜ ಸಂಗತಿಗಳೆರಡೂ ಇರುತ್ತವೆ. ಮೇಲಿನ ಎರಡು ಉಲ್ಲೇಖಗಳು ಸಹಜ ಸಂಸ್ಕೃತಿಯಲ್ಲಿ ಬರುತ್ತವೆ. ಸತಿಸಹಗಮನ ಹಾಗೂ ವೈಧವ್ಯ ಕೃತಕವಾಗಿರುತ್ತವೆ. ನಮ್ಮಲ್ಲಿ ಸಹಜತೆಗಿಂತಲೂ ಕೃತಕ ಶ್ರೇಷ್ಠತೆಗೆ ಹೆಚ್ಚಿನ ಗೌರವವಿದೆ.

ಕೋಮುವಾದಿ ಸಂಘಪರಿವಾರದವರು ಚಿತ್ರಕಥೆಯನ್ನಷ್ಟೇ ಅಲ್ಲ, ಅದರ ಶೀರ್ಷಿಕೆಯನ್ನೂ ವಿರೋಧಿಸುತ್ತಿದ್ದಾರೆ. ಅವರ ಪ್ರಕಾರ ಪವಿತ್ರ ಗಂಗಾನದಿಯ ಹೆಸರನ್ನು ಕುಲಗೆಡಿಸುವ ಉದ್ದೇಶ ಚಿತ್ರದ ಶೀರ್ಷಿಕೆಯಲ್ಲಿದೆ. ಅದಕ್ಕಾಗಿ ಅದನ್ನು ತೀವ್ರವಾಗಿ ವಿರೋಧಿಸುತ್ತಿದ್ದಾರೆ. ಭಾರತೀಯರಲ್ಲಿ ಜಲಸಂಸ್ಕೃತಿ-ಅತ್ಯಂತ ಪ್ರಬಲವಾಗಿದೆ. ನಮ್ಮಲ್ಲಿ ನೀರು ಕೇವಲ ನೀರಲ್ಲ, ಮಾತೃದೇವತೆಯಾದ ಅದು ಹೆಣ್ತನದ, ತಾಯ್ತನದ, ಫಲವಂತಿಕೆಯ ಸಂಕೇತ. ಒಟ್ಟಾರೆ ಅದು ಜೀವನದ ಸಂಕೇತ. ಆರ್ಯರಿಗೆ ಅಗ್ನಿ ಶ್ರೇಷ್ಠವಾದರೆ, ದ್ರಾವಿಡರಿಗೆ ನೀರು ಶ್ರೇಷ್ಠ 'ಇವರು ಹೆಣ್ಣನ್ನು ಅತ್ಯಂತಿಕ ಶಕ್ತಿಯೆಂದು ನಂಬುತ್ತಾರೆ. "ವಿಧವೆ ನೀರು ಹೊತ್ತುಕೊಂಡು ಎದುರಿಗೆ ಬಂದರೆ ಅಶುಭ, ಮುತ್ತೈದೆ ಬಂದರೆ ಶುಭ" ಎನ್ನುವ ನಂಬಿಕೆ ನಮ್ಮಲ್ಲಿ ಪ್ರಚಲಿತದಲ್ಲಿದೆ. ಅದಕ್ಕಾಗಿ, ಅಶುಭದ ಸಂಕೇತರಾದ ವಿಧವೆಯರ ಕುರಿತಿರುವ ಚಲನಚಿತ್ರಕ್ಕೆ 'ವಾಟರ್' ಎಂಬ ಶೀರ್ಷಿಕೆ ಏಕೆ ಎಂಬುದು ಅವರ ಪ್ರಶ್ನೆ. ಭಾರತೀಯ ಸಮಾಜದಲ್ಲಿ ನೀರನ್ನು ಯಾರು ಮುಟ್ಟುತ್ತಾರೋ ಅವರ ಮೇಲೆ, ಅದರ ಮೇಲೆ ನೀರಿನ ಗುಣಾವಗುಣಗಳು, ಲಕ್ಷಣಗಳು ನಿರ್ಧರಿತವಾಗುತ್ತವೆ.

ಅರ್ಥ, ಫೈರ್ ಚಲನಚಿತ್ರಗಳು ಬಿಡುಗಡೆಗೊಂಡ ನಂತರ ವಿವಾದವನ್ನೆಬ್ಬಿಸಿದರೆ, 'ವಾಟರ್' ಚಿತ್ರೀಕರಣದ ಸಂದರ್ಭದಲ್ಲಿಯೇ ವಿರೋಧವನ್ನೆದುರಿಸುತ್ತಿದೆ. ಚಿತ್ರದ ಸುತ್ತ ಎರಡು ಪ್ರಮುಖ ಪ್ರಮೇಯಗಳು ಹುಟ್ಟಿಕೊಂಡಿವೆ. 'ಚಿತ್ರಕಥೆ ಹಿಂದೂ ಸಂಸ್ಕೃತಿಗೆ ಧಕ್ಕೆಯನ್ನುಂಟು ಮಾಡುತ್ತದೆ' ಎನ್ನುವದೊಂದು. ಮತ್ತೊಂದು 'ನಮ್ಮ ಸಂಸ್ಕೃತಿಯಲ್ಲಿಯ ತಪ್ಪನ್ನು ಒಪ್ಪಿಕೊಳ್ಳುವದರಿಂದ ನಮ್ಮ ಘನತೆ ಹೆಚ್ಚಾಗುತ್ತದೆ' ಈ ಪ್ರಮೇಯಗಳು ಸಿನಿಮಾದಲ್ಲಿದೆಯೋ, ಸಿನಿಮಾ ತೆಗೆಯುವವರ ಮನಸ್ಸಿನಲ್ಲಿದೆಯೋ ಎಂಬುದನ್ನು ಮೊದಲು ಅರ್ಥಮಾಡಿ ಕೊಳ್ಳಬೇಕು. ಬಹಳ ಬಾರಿ ಅವರೇ ಕಟ್ಟಿದ ಪ್ರಮೇಯಕ್ಕೆ, ಅವರೇ ವಿರೋಧವನ್ನು ಸೃಷ್ಟಿಸಿಕೊಳ್ಳುತ್ತಿರುತ್ತಾರೆ. ಇದು ಪ್ರಚಾರ ಮಾಧ್ಯಮದ 'ತಂತ್ರ'. ಅದಕ್ಕಾಗಿದ ದೀಪಾ ಮೆಹ್ತಾಳನ್ನು ಮುಗ್ಧವಾಗಿ ನಾವು ನಂಬುವಂತಿಲ್ಲ. ಅವಳ ಉದ್ದೇಶ ಒಳ್ಳೆಯದಿರಬಹುದು. ಆದರೆ ಆಕೆಯ ಮನೋಭಾವವನ್ನು ನಂಬುವಂತಿಲ್ಲ.

ಉತ್ತರ ಪ್ರದೇಶದ ಸಹಕಾರ ಹಾಗೂ ಜನತೆಯಿಂದ ಚಿತ್ರೀಕರಣಕ್ಕೆ ವಿರೋಧ ಎದುರಿಸುತ್ತಿರುವ ದೀಪಾ ಮೆಹ್ತಾ ನರ್ಮದ ನದಿ ತೀರದಲ್ಲಿ, ಹೂಗ್ಲಿ ನದಿ ದಂಡೆಯಲ್ಲಿ ವಾಟರ್ ಚಿತ್ರೀಕರಣಕ್ಕೆ ಆಯಾ ರಾಜ್ಯದ ಮುಖ್ಯ ಮಂತ್ರಿಗಳಿಂದ ಆಹ್ವಾನವನ್ನು ಪಡೆದುಕೊಂಡಿದ್ದಾಳೆ. ಬಿಹಾರ ಸರಕಾರವೂ ಕೂಡ ಹಸಿರು ನಿಶಾನೆಯನ್ನು ಬೀಸಿ ಚಿತ್ರೀಕರಣಕ್ಕೆ ಸ್ವಾಗತಿಸಿದೆ. ಚಿತ್ರೀಕರಣಕ್ಕೆ ಆಹ್ವಾನ ನೀಡಿದ ಮೂರೂ ಪಕ್ಷಗಳು ಬಿಜೆಪಿಯೇತರ ಸಹಕಾರಗಳು ಎಂಬುದನ್ನು ಮರೆಯಬಾರದು. ದೀಪಾ ಮೆಹ್ತಾಳನ್ನೊಳಗೊಂಡಂತೆ ಇವರಾರೂ ವಿಧವಾ ಸಮಸ್ಯೆಯ ಕುರಿತು ತಲೆಕೆಡಿಸಿಕೊಂಡಿಲ್ಲ, ಅದು ಅವರಿಗೆ ತೀವ್ರವಾಗಿ ಕಾಡಿಯೂ ಇಲ್ಲ, ನಮ್ಮ ಪತ್ರಿಕೆಗಳು ಚಿತ್ರದ ನಿರ್ದೇಶಕಿಗೆ, ನಟಿಯರಿಗೆ, ರಾಜಕೀಯ ನಾಯಕರಿಗೆ ಹಾಗೂ

ಕೋಮುವಾದಿ ಶಕ್ತಿಗಳಿಗೆ ಬಿಟ್ಟಿ ಪ್ರಚಾರವನ್ನು ನೀಡಿದವು. ನಿಜವಾದ ವಿಧವೆಯ ಆಕ್ರಂದನವನ್ನು ಯಾರಿಗೂ ಕೇಳಿಸದಂತೆ ಮುಚ್ಚಿ ಹಾಕಿದವು.

ಭಾರತದಲ್ಲಿ ಹೆಣ್ಣಿನ ಮೇಲೆ ಎರಡು ನಿಟ್ಟಿನಲ್ಲಿ ಶೋಷಣೆ ನಡೆದಿದೆ. 1) ಬಹುಪತ್ನಿತ್ವ, 2) ಮಹಾ ಮಾಸ್ತಿತ್ವ. ಮೊದಲನೆಯದರಲ್ಲಿ ಹೆಣ್ಣನ್ನು ತಾನಿರುವವರೆಗೂ ಭೋಗದ ವಸ್ತುವನ್ನಾಗಿ ಮಾಡಿಕೊಳ್ಳುವನು. ಅದು ಬಹು ಆಗುವವರೆಗೂ ಮಾಡಿಕೊಳ್ಳುವನು. ಎರಡನೆಯದರಲ್ಲಿ ಒಂದು ವೇಳೆ ತಾನು ಸತ್ತರೆ ತನ್ನ ಜೊತೆಗೆ ಅವರನ್ನು ನಾಶಮಾಡುವ ಪ್ರವೃತ್ತಿ ಕಂಡುಬರುತ್ತದೆ. ವೈಧವ್ಯ ಹೊತ್ತುಕೊಂಡು ಈ ಸಮಾಜದಲ್ಲಿ ಮೌನದಿಂದ ಬದುಕುವುದು ಅಷ್ಟು ಸುಲಭವಲ್ಲ.

ವೈದಿಕ ಮೂಲದಿಂದಲೇ ವೈಧವ್ಯದ ಪರಿಕಲ್ಪನೆ ಮೂಡಿದೆ. ಮಾತೃಪ್ರಧಾನ ಘಟ್ಟದಲ್ಲಿ ವಿವಾಹ, ವೈಧವ್ಯ ಎರಡೂ ರೂಪಗಳು ಅಸ್ತಿತ್ವದಲ್ಲಿರಲಿಲ್ಲ. ವೈದಿಕ ಸಂಸ್ಕೃತಿ ಪ್ರಬಲವಾಗಿ ಶ್ರೇಷ್ಠತೆಯ ಹಣೆ ಪಟ್ಟಿಕೊಂಡು ಮೆರೆಯತೊಡಗಿದಾಗ ಮಾತೃಪ್ರಧಾನ ಘಟ್ಟದ ಎಲ್ಲ ಆಚರಣೆಗಳು ಕಣ್ಮರೆಯಾದವು. ಭಾರತದಲ್ಲಿನ ಅನೇಕ ಜಾತಿ ಧರ್ಮಗಳಿಗೆ, ವೈದಿಕ ಸಂಪ್ರದಾಯದ ಪ್ರಭಾವವಲಯದಿಂದ ಬಿಡಿಸಿಕೊಳ್ಳಲಾಗಲಿಲ್ಲ. ಇದರ ಪರಿಣಾಮದಿಂದಲೇ ಭಾರತದಲ್ಲಿ ವೈಧವ್ಯ ಎನ್ನುವುದು ತೀವ್ರತರ ಸಮಸ್ಯೆಯಾಗಿ ಕಾಡಿದೆ. ಹೀಗಾಗಿ ಈ ಸಮಸ್ಯೆಯ ಕುರಿತಂತೆ ಅನೇಕ ಚಳುವಳಿಗಳು ನಡೆದವು. ರಾಜಾರಾಮ್ ಮೋಹನರಾಯ, ದಯಾನಂದ ಸರಸ್ವತಿ, ಈಶ್ವರಚಂದ್ರ ವಿದ್ಯಾಸಾಗರ ಮೊದಲಾದವರೆಲ್ಲ ವಿಧವಾ ಸಮಸ್ಯೆಗೆ ತಿವ್ರವಾಗಿ ಹೋರಾಟ ನಡೆಸಿದರು. ವಿಧವಾ ವಿವಾಹದ ಚಳುವಳಿಯ ನೇತಾರರೆಲ್ಲರೂ ಬ್ರಾಹ್ಮಣ ಸಮಾಜಕ್ಕೆ ಸೇರಿದವರು ಎಂಬುದು ಗಮನಿಸಬೇಕಾದ ಸಂಗತಿ. ತಮ್ಮ ಜನಾಂಗದಲ್ಲಿಯ ವಿಧವಾ ಸಮಸ್ಯೆಯ ತೀವ್ರತೆಯನ್ನು ಮನಗಂಡಿದ್ದರಿಂದಲೇ, ಅದನ್ನೇ ತಮ್ಮ ಹೋರಾಟದ ಅಂತಿಮ ಧ್ಯೇಯವಾಗಿಸಿ ಕೊಂಡರು. ಆದರೂ ಅವುಗಳು ಸಮಾಜದಿಂದ ಕಣ್ಮರೆಯಾಗಿಲ್ಲ. ಧಾರ್ಮಿಕ ಪರಿಧಿಯೊಳಗೆ ಸ್ತ್ರೀಕೇಂದ್ರವಾಗಿಟ್ಟುಕೊಂಡು ಹೆಣೆದ ಇಂತಹ ಆಚರಣೆಗಳು ಅಷ್ಟು ಸುಲಭವಾಗಿ ಸಮಾಜದಿಂದ ಕಣ್ಮರೆಯಾಗುವುದಿಲ್ಲ. ಅವುಗಳನ್ನು ಇಲ್ಲವಾಗಿಸಲು ಪ್ರಯತ್ನಿಸಿದಷ್ಟು, ಅವು ಪ್ರಬಲವಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತವೆ.

ವೈಧವ್ಯದ ವಿಧಿ ಆಚರಣೆಗಳು ಬ್ರಾಹ್ಮಣರಲ್ಲಿ ಉಗ್ರ ಕ್ರೂರವಾಗಿದ್ದರೆ, ಬ್ರಾಹ್ಮಣೇತರರಲ್ಲಿ ಸೌಮ್ಯ ಕ್ರೂರವಾಗಿವೆ. ಹೀಗಾಗಿ ವಿಧವೆಯರ ನೋವನ್ನು ಎದುರಿಗಿಟ್ಟುಕೊಂಡು ಯಾವುದು ಸಹ್ಯ ಯಾವುದು ಸಹ್ಯವಲ್ಲ ಎಂದು ತಕ್ಕಡಿಯಲ್ಲಿಟ್ಟು ನೋಡುವುದು ಅಷ್ಟು ಉಚಿತವಲ್ಲ. ವೈದಿಕ ಸಂಸ್ಕೃತಿ ಹಾಗೂ ಅದರ ಪ್ರಭಾವವಲಯಕ್ಕೊಳಗಾದ ವೈದಿಕೇತರ ಸಂಸ್ಕೃತಿಗಳು ವಿಧವೆಯರ ಕುರಿತಂತೆ ಮಾನವೀಯ ನೆಲೆಗಳಿಂದಾಚೆ ನಿಂತು ಮಾತನಾಡಿವೆ. ತಲೆಯನ್ನು ಬೋಳಿಸಿಕೊಳ್ಳುವುದು, ರವಿಕೆ ಹಾಕಿಕೊಳ್ಳದಿರುವುದು, ಒಂದ್ಹೊತ್ತು ಮಾತ್ರ ಊಟ ಮಾಡುವುದು ವಿಪ್ರ ವಿಧವೆಯರ ಲಕ್ಷಣಗಳು. ಇವುಗಳು, ಸಾಮಾಜಿಕ ಅಪರಾಧವೆಸಗಿದ ವ್ಯಕ್ತಿಗೆ ನೀಡುವ ಕಠಿಣ ಶಿಕ್ಷೆಗಳಂತಿವೆ. ವೈದಿಕೇತರ ಬಹುಪಾಲು ಜಾತಿ ಧರ್ಮಗಳಲ್ಲಿ ಈ ಯಾವ ಆಚರಣೆಗಳಿಲ್ಲದಿದ್ದರೂ, ವಿಧವೆಯನ್ನು ಗೌರವದಿಂದ ಕಂಡಿಲ್ಲ, ಮರುಮದುವೆಗೆ ಅವಕಾಶವನ್ನು ನೀಡಿಲ್ಲ. ಹೀಗಾಗಿ ಇವರಿಬ್ಬರಲ್ಲಿ ಯಾರ ನೋವು ಹೆಚ್ಚು ಎಂದು ಪ್ರತ್ಯೇಕಿಸಿ ನೋಡುವ ಬದಲು, ಅವರನ್ನೆಲ್ಲ ಒಂದೆಡೆ ಇಟ್ಟು ಸಮಸ್ಯೆಯ ಸ್ವರೂಪವನ್ನು ಗ್ರಹಿಸಬೇಕಿದೆ. ಮಹಿಳಾ ಸಮಸ್ಯೆಗಳನ್ನು ಬಿಡಿ-ಬಿಡಿಯಾಗಿ ನೋಡುವ ಬದಲು, ಇಡಿಯಾಗಿ ಗಮನಿಸುವ ಅಗತ್ಯವಿದೆ. ಹೀಗಾದಾಗ ಅವುಗಳಿಗೆ ಸಮಗ್ರ ಸ್ವರೂಪ ದೊರೆಯುತ್ತದೆ. ಇದರಿಂದಾಗಿ, ಮಹಿಳಾ ಹೋರಾಟಕ್ಕೆ ಹೆಚ್ಚಿನ ಬಲ ಬಂದಂತಾಗುತ್ತದೆ. ಹೀಗಾದರೆ ಸ್ತ್ರೀ ಮೇಲಿನ ಶೋಷಣೆಯ ತೀವ್ರತೆ ಇಳಿಮುಖವಾಗಬಹುದು.

ಅಧ್ಯಯನದ ಅನುಕೂಲಕ್ಕಾಗಿ ಉತ್ತರ ಭಾರತದ ವಿಧವೆಯರು, ದಕ್ಷಿಣ ಭಾರತದ ವಿಧವೆಯರು ಎಂದು ಎರಡು ಬಗೆಗಳಲ್ಲಿ ವಿಂಗಡಿಸಿಕೊಂಡಿದೆ. 'ವಾಟರ್' ಚಿತ್ರಕಥೆಯ ಕುರಿತಂತೆ ತೀವ್ರವಾದ ವಿವಾದ ಹಾಗೂ ವಿರೋಧ ಹುಟ್ಟಿಕೊಂಡದ್ದು ಉತ್ತರ ಭಾರತದಲ್ಲಿಯೇ. ಈಗಲೂ ಉತ್ತರಭಾರತ ಆರ್ಯ ಸಂಸ್ಕೃತಿ ಪ್ರಧಾನವಾದುದಾಗಿದೆ. ಅದನ್ನು 'ಕೃಷ್ಣ ಸಂಸ್ಕೃತಿ' ಎಂದು ಗುರುತಿಸಬಹುದು. ರಾಜತ್ವ ಬಂದ ತಕ್ಷಣ ವಿಷ್ಣು ಹುಟ್ಟಿಕೊಂಡನು. ವಿಷ್ಣುವಿನ ಅವತಾರವಾಗಿರುವ ಕೃಷ್ಣನು ಪ್ರಬಲವಾಗಿ ಬೆಳೆದು ನಿಂತನು. ಅವನು ಕನ್ಯೆಯರನ್ನು, ಗಂಡುಳ್ಳ ಬಾಲೆಯರನ್ನು, ವಿಧವೆಯರನ್ನು ಕೆಣಕುತ್ತಾನೆ, ಛೇಡಿಸುತ್ತಾನೆ. ಕೃಷ್ಣ ಪರಿಕಲ್ಪನೆಯೇ ಹೆಣ್ಣಿನ ಸ್ಥಾನವನ್ನು ಭೋಗದ ಸರಕಿಗೆ ಇಳಿಸಿತು. ವಿಲಾಸ ಜೀವನದ ಜನರು ಅದನ್ನು ವೈಭವೀಕರಿಸಿದರು. ಅದರಿಂದಾಗಿ ಮಹಿಳಾ ಸ್ಥಾನಮಾನಗಳು ಏಕದಂ ಎಂಬಂತೆ ಜರ್‍ರನೆ ಇಳಿದವು. ಹೀಗಾಗಿ ಉತ್ತರ ಭಾರತದಲ್ಲಿ ವಿಧವೆಯರು ಮನೆಯಿದ್ದೂ ಅನಾಥರಾಗುತ್ತಾರೆ. ದೇವಾಲಯಗಳಲ್ಲಿ, ವಿಧವಾ ಆಶ್ರಮಗಳಲ್ಲಿ ಆಶ್ರಯ ಪಡೆಯುತ್ತಾರೆ. ಇದು ಅಲ್ಲಿರುವ ವಾಸ್ತವ ಭೀಕರ ಸತ್ಯ. ದಕ್ಷಿಣ ಭಾರತದಲ್ಲಿ ದ್ರಾವಿಡ ಸಂಸ್ಕೃತಿಯ ಸೊಗಡಿದೆ. ಹೀಗಾಗಿ ಇಲ್ಲಿ 'ವೈಧವ್ಯ' ಎನ್ನುವುದು ಎಷ್ಟೇ ಕ್ರೂರ ಸ್ವರೂಪವನ್ನು ಪಡೆದುಕೊಂಡಿದ್ದರೂ, ವಿಧವೆಯರನ್ನು ಮನೆಯೊಳಗೆ ಇಟ್ಟುಕೊಳ್ಳುವ ಉದಾರತೆಯನ್ನು ಉಳಿಸಿಕೊಂಡಿವೆ. ಆ ದೊಡ್ಡಸ್ತಿಕೆಯ ಮುಸುಕಿನಲ್ಲಿಯೇ ಅವರನ್ನು ತೊತ್ತಿನಂತೆ ದುಡಿಸಿಕೊಳ್ಳುತ್ತದೆ. ಆ ಮಾತು ಬೇರೆ. ಫಣಿಯಮ್ಮನಂತಹ ವಿಧವಾ ಕೇಂದ್ರಿತ ಚಲನಚಿತ್ರಗಳು ಕನ್ನಡದಲ್ಲಿ ಮೂಡಿಬಂದಿದ್ದರೂ, ಅವುಗಳು 'ವಾಟರ್'ನಷ್ಟು ಗಲಾಟೆಯನ್ನೆಬ್ಬಿಸಲಿಲ್ಲ.

ಭಾರತೀಯ ದೃಷ್ಟಿಕೋನದಲ್ಲಿ ವಿಧವೆಯರನ್ನು ಮೊದಲಿನಿಂದಲೂ ಸಹಜವಾಗಿ ನೋಡಿಲ್ಲ. 'ವೈಧವ್ಯ'

ಎನ್ನುವುದು ಭೀಕರವಾದುದು, ನರಕಮಯವಾದುದು. ಗಂಡ ಇದ್ದೂ ಯಾತನೆಯನ್ನು ಅನುಭವಿಸುವುದು ಬೇರೆಯಾಗುತ್ತದೆ. ಅದು ಅಷ್ಟು ಭೀಕರವಾಗಿರುವುದಿಲ್ಲ, ವೃದ್ಧಾಪ್ಯದಲ್ಲಿ ವೈಧವ್ಯ ಬಂದರೆ ಅದು ಅಷ್ಟು ತೀವ್ರ ಸಮಸ್ಯೆಯಾಗಿ ಕಾಡಲಾರದು. ಕಾರಣ ಅವಳಲ್ಲಿರುವ ದೈಹಿಕ ಹಸಿವು ಇಂಗಿ ಹೋಗಿರುತ್ತದೆ. ಹೊಟ್ಟೆ ಹಸಿವು ಅಷ್ಟಾಗಿ ಕಾಡಿಸದು. ಯೌವ್ವನದಲ್ಲಿ ವೈಧವ್ಯ ಪ್ರಾಪ್ತವಾದರೆ ಸಹ್ಯವಾಗದ ಜೀವನವನ್ನು ಸಾಗಿಸಬೇಕಾಗುತ್ತದೆ. ಹೊಟ್ಟೆ ಹಸಿವು ಹಾಗೂ ದೈಹಿಕ ಹಸಿವು ಅವಳನ್ನು ತೀವ್ರವಾಗಿ ಕಾಡುತ್ತಿರುತ್ತದೆ. ಇದರಲ್ಲಿ ಮೊದಲನೆಯದು ತುಂಬಬಹುದು. ಆದರೆ, ಎರಡನೆಯದನ್ನು ತುಂಬಲಾಗುವುದಿಲ್ಲ, ಇವೆರಡರ ಜೊತೆಗೆ ಸಾಮಾಜಿಕ ಅಪಮಾನವು ಅವಳನ್ನು ಆಳವಾಗಿ ಚುಚ್ಚುತ್ತಿರುತ್ತದೆ. ಶರಣರು ಪ್ರಮುಖವಾಗಿ ಮೂರು ಸಂಗತಿಗಳನ್ನು ಪ್ರಸ್ತಾಪಿಸುತ್ತಾರೆ. 1) ಪ್ರಾಣ, 2) ಅರ್ಥ, 3) ಅಭಿಮಾನ. ಮೊದಲಿನ ಎರಡು ಸಂಗತಿಗಳನ್ನು ಕಳೆದುಕೊಂಡರೆ ಏನೂ ಕಳೆದುಕೊಂಡಂತಾಗುವುದಿಲ್ಲ. ಇಲ್ಲಿ ಅಭಿಮಾನದ ಪ್ರಶ್ನೆ ಬಹುಮುಖ್ಯವಾಗಿ ನಿಲ್ಲುತ್ತದೆ. ಅಭಿಮಾನ ಹೋದರೆ ಬದುಕೇ ಕ್ಷುಲ್ಲಕವಾಗುತ್ತದೆ. ಅದಕ್ಕಾಗಿಯೇ ಗರತಿ 'ಕರಣ ಬಂದರೆ ಕಾಯೋ, ಮರಣ ಬಂದರೆ ಒಯ್ಯೊ ! ಕರುಣಿ ಕಲ್ಯಾಣಿ ಬಸವಣ್ಣ ! ಕಡೆತನಕ ಕಾಯೋ ಅಭಿಮಾನ' ಎಂದಿರುವಳು.

ವೈಧವ್ಯದ ಕ್ರೂರಮುಖಗಳು - ಸಮಾಜದಲ್ಲಿ ಜೀವಂತವಾಗಿದ್ದರೂ ಅವುಗಳು ಈ ಫ್ಯಾಸಿಸ್ಟ್ ಶಕ್ತಿಗಳಿಗೆ ಅಪಮಾನಗೊಳಿಸುವುದಿಲ್ಲ, ಕೆರಳಿಸುವುದಿಲ್ಲ, ಬದಲಾಗಿ ಸಂಸ್ಕೃತಿಯ ವರ್ಚಸ್ಸನ್ನು ಹೆಚ್ಚಿಸುತ್ತವೆ.

ಗಂಡನ ಸಾವಿನ ನಂತರ ಆಕೆಯನ್ನು ವಿಕಾರಗೊಳಿಸಿ ವಿಕರ್ಷಣೆಗೆ ಈಡು ಮಾಡುವುದೇ ವಿಧವಾ ಸಂಪ್ರದಾಯದ ಮೂಲ ಉದ್ದೇಶ. ಕಲ್ಪನೆಗೂ ಕೈಗೆಟುಕದ ಈ ನೀಚ ಆಚರಣೆ ಈ ಫ್ಯಾಸಿಸ್ಟ್ ಹೃದಯಗಳಿಗೆ ತಾಕಿಲ್ಲ.

ಒಮ್ಮೆ ವೈಧವ್ಯ ಬಂತು ಎಂದರೆ ಅವಳು ಸಾರ್ವಜನಿಕರ ಸರಕಾಗುತ್ತಾಳೆ. ಆಗ ಯಾವನೋ ಒಬ್ಬ ಇಲ್ಲವೆ ಆಯ್ದ ಕೆಲವರು ಅಥವಾ ಹಲವರು ಅವಳ ಮೇಲೆ ಅಧಿಕಾರ ಸ್ಥಾಪಿಸಲು ಪ್ರಯತ್ನಿಸುತ್ತಾರೆ. ಇಂತಹ ಸಂದರ್ಭಗಳಲ್ಲಿ ಅವಳು ಒಬ್ಬನ ಸರಕಾಗಬಹುದು ಅಥವಾ ಆಯ್ದ ಕೆಲವರ ಸರಕಾಗಬಹುದು. ಇಲ್ಲವೆ ಸರ್ವರ ಸರಕಾಗಬಹುದು. ಕ್ರೀಡಾಭಿರಾಮದಲ್ಲಿ ಮೂರು ಬಗೆಗಳ ವಿಧವೆಯರು ನಮಗೆ ದೊರೆಯುತ್ತಾರೆ. ಕ್ರೀಡಾಭಿ-ರಾಮದಲ್ಲಿಯ ವಿಧವೆಯರ ಜೀವನ ಮೇಲ್ನೋಟಕ್ಕೆ, ಅವಳ ಲೈಂಗಿಕ ಸ್ವಾತಂತ್ರ್ಯವನ್ನು ಎತ್ತಿ ಹಿಡಿದಂತೆ ಕಾಣಬಹುದು. ಪುರುಷರ ಲೈಂಗಿಕ ದಬ್ಬಾಳಿಕೆಗೆ ಒಳಗಾದ ಕಹಿಸತ್ಯ ಅದರ ಅಂತರ್ಯದಲ್ಲಡಗಿದೆ. ಆದ್ದರಿಂದ ಇಂತಹ ಸಂಪ್ರದಾಯಾ-ಚರಣೆಗಳನ್ನು ಕೈಬಿಟ್ಟು ಅವಳಿಗೆ ಮರುವಿವಾಹ ಅವಕಾಶವನ್ನು ಕಲ್ಪಿಸಿಕೊಡಬೇಕು. ಅಂತಹ ಮದುವೆಗಳನ್ನು ಗೌರವಿಸಬೇಕು. ಹೀಗಾದರೆ ವಿಧವೆಗೆ ಕೌಟುಂಬಿಕ ಹಾಗೂ ಸಾಮಾಜಿಕ ಗೌರವವನ್ನು ನೀಡಿದಂತಾಗುತ್ತದೆ. ನಾನು ಪುರುಷಶಾಹಿ ವ್ಯವಸ್ಥೆ ರೂಪಿಸಿದ ವೈವಾಹಿಕ ಚೌಕಟ್ಟನ್ನು ವೈಭವೀಕರಿಸುತ್ತಿದ್ದೇನೆ, ಅನಿವಾರ್ಯವಾಗಿಸುತ್ತಿದ್ದೇನೆ ಎಂದಲ್ಲ, ಪ್ರತಿಯೊಬ್ಬ ವ್ಯಕ್ತಿಗೂ ಒಂದು ವಯಸ್ಸಿನಲ್ಲಿ ಸಂಗಾತಿಯ ಅಗತ್ಯವಿರುತ್ತದೆ. ಅದನ್ನು ಸಮಾಜದಲ್ಲಿ ಸಮ್ಮತವಾಗಿಸಲು 'ವಿವಾಹ' ಒಂದು ನೆಪ ಮಾತ್ರ. ಈ ನಿಟ್ಟಿನಲ್ಲಿ ವೈವಾಹಿಕ ಪರಿಕಲ್ಪನೆಯನ್ನು ಸ್ವೀಕರಿಸಬೇಕು. ಗಂಡು ಹೆಣ್ಣುಗಳ ನಡುವೆ ಶ್ರೇಣೀಕರಣ ಇಲ್ಲದ ಮದುವೆಗಳು ಆರೋಗ್ಯಕರ ಸಮಾಜಕ್ಕೆ ಬುನಾದಿಯಾಗಬಲ್ಲವು.

ವಾಟರ್ ಚಿತ್ರಕಥೆಯನ್ನಾಗಲಿ, ಅದನ್ನು ನಿರ್ದೇಶಿಸುತ್ತಿರುವ ದೀಪಾ ಮೆಹ್ತಾ ಬಗೆಗಾಗಲಿ, ವಿರೋಧಿಸುತ್ತಿರುವ ಫ್ಯಾಸಿಸ್ಟ್ ಶಕ್ತಿಗಳ ಕುರಿತಾಗಲಿ, ಅದಕ್ಕೆ ಹಸಿರು ನಿಶಾನೆ ತೋರಿಸುವ ರಾಜಕೀಯ ಪಕ್ಷಗಳ ಬಗೆಗಾಗಲಿ ಚರ್ಚಿಸುವುದರಿಂದ ಯಾವುದೇ ರೀತಿಯ ಸಾಮಾಜಿಕ ಹಾಗೂ ಶೈಕ್ಷಣಿಕ ಲಾಭ ದೊರೆಯದು. ಇಲ್ಲಿ ಬಹುಮುಖ್ಯವಾಗಿ ಚರ್ಚೆಗೊಳಪಪಡಿಸಬೇಕಾಗಿರುವುದು ವಿಧವೆಯರ ಬದುಕು ಹಾಗೂ ಭಾವನೆಗಳನ್ನು, ನಮ್ಮ ಅಧ್ಯಯನಗಳು ಇಂತಹ ಸಾಮಾಜಿಕ ವಸ್ತುಸ್ಥಿತಿಯ ಜೊತೆಗೆ ಹೇಗೆ ಸಮೀಕರಣಗೊಳ್ಳಬೇಕೆಂಬ ಸವಾಲು ನಮ್ಮೆದುರಿಗಿದೆ. ಮಹಿಳೆಯರು ಅಧ್ಯಯನದ ವಸ್ತುವಾಗುವ ಬದಲು, ಅವರಲ್ಲಿಯೇ ಸ್ವಯಂ ಜಾಗ್ರತಿ ಮೂಡಬೇಕಿದೆ. ಅವರೇ ತಮ್ಮ ಸಮಸ್ಯೆಗಳಿಗೆ ಪರಿಹಾರಗಳನ್ನು ಹುಡುಕಿಕೊಳ್ಳಬೇಕಿದೆ. ಒಂದು ವೇಳೆ ಮಹಿಳೆ ಸಮಸ್ಯೆಗೆ ಪರಿಹಾರವನ್ನು ಕಂಡುಕೊಂಡರೂ ಅದು ಈ ಪುರುಷಶಾಹಿ ಸಮಾಜದಲ್ಲಿ ಅಷ್ಟು ಸುಲಭವಾಗಿ ಚಲಾವಣೆಗೊಳ್ಳುತ್ತದೆ ಎಂದು ಹೇಳಲಿಕ್ಕಾಗದು. ಅದರರ್ಥ ಆ ನಿಟ್ಟಿನಲ್ಲಿ ಪ್ರಯತ್ನಪಡುವುದು ವ್ಯರ್ಥ ಎಂದು ಹೇಳುತ್ತಿಲ್ಲ, ಅದರ ಫಲಿತಾಂಶ ಬಹಳ ತಡವಾಗಿ ದೊರೆಯುತ್ತದೆ. ಅಲ್ಲಿಯವರೆಗೂ ಸಹನೆಯಿಂದ ಆಶಾದಾಯಕ ಮನೋಭಾವದಿಂದ ಹೋರಾಟ ಮುಂದುವರಿಸಬೇಕಿದೆ.

**ಆಧಾರ ಗ್ರಂಥಗಳು :**

1) ಆರ್ವಿಯಸ್ ಸುಂದರಂ (ಅನು), *ವಿನುಗೊಂಡ ವಲ್ಲಭರಾಯ ವಿರಚಿತ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

2) ನಾಗೇಗೌಡ ಎಚ್.ಎಲ್. (ಸಂ), *ಪ್ರವಾಸಿ ಕಂಡ ಇಂಡಿಯಾ, ಸಂಪುಟ 2*, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು 1966.

*• ಕೃಪೆ : ಮಹಿಳಾ ಅಧ್ಯಯನ*

## ಡೆಂಗಿ ಜ್ವರ ತಡೆಗಟ್ಟುವ ಬಗ್ಗೆ ಮುಂಜಾಗ್ರತೆ ಕ್ರಮಗಳು

*ಡೆಂಗಿ ಜ್ವರ ಎಂದರೇನು ?*

ಡೆಂಗಿ ಜ್ವರವು ಡೆಂಗಿ ವೈರಸ್‌ನಿಂದ ಉಂಟಾಗುವ ಕಾಯಿಲೆ. ಈ ಕಾಯಿಲೆಯು ಸೋಂಕು ಹೊಂದಿದ ಈಡಿಸ್ ಈಡಿಪ್ಟೈ ಎಂಬ ಸೊಳ್ಳೆಯ ಕಚ್ಚುವಿಕೆಯಿಂದ ಒಬ್ಬರಿಂದ ಒಬ್ಬರಿಗೆ ಹರಡುತ್ತದೆ.

*ಈ ರೋಗದ ಮುಖ್ಯ ಲಕ್ಷಣಗಳು :*

ಇದ್ದಕ್ಕಿದ್ದಂತೆ ತೀವ್ರಜ್ವರ, ವಿಪರೀತ ತಲೆನೋವು, ಕಣ್ಣುಗಳ ಹಿಂಭಾಗದಲ್ಲಿ ನೋವು, ಮಾಂಸಖಂಡ ಮತ್ತು ಕೀಲುಗಳಲ್ಲಿ ನೋವು ಕಾಣಿಸಿಕೊಳ್ಳುವುದು ಈ ರೋಗದ ಲಕ್ಷಣ. ಹಲವು ಬಾರಿ ಮೂಗು, ಬಾಯಿ ಮತ್ತು ವಸಡುಗಳಲ್ಲಿ ರಕ್ತಸ್ರಾವದ ಚಿಹ್ನೆಗಳು ಕಂಡುಬರುತ್ತವೆ. ಈ ಲಕ್ಷಣಗಳು ಕಂಡುಬಂದಲ್ಲಿ ತಕ್ಷಣ ಹತ್ತಿರದ ಸರ್ಕಾರಿ ಆಸ್ಪತ್ರೆಗೆ ದಾಖಲಿಸಿ, ರಕ್ತ ಪರೀಕ್ಷೆ ಮಾಡಿಸಿ, ಸೂಕ್ತ ಚಿಕಿತ್ಸೆ ಪಡೆಯುವುದು.

*ಸಾರ್ವಜನಿಕರು ಡೆಂಗಿ ರೋಗವನ್ನು ತಡೆಗಟ್ಟಲು ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳು :-*

- ಡೆಂಗಿ ಹರಡುವ ಈಜಿಪ್ಟೈ ಸೊಳ್ಳೆಗಳು ಮನೆಯಲ್ಲಿನ ನೀರು ಶೇಖರಿಸುವ ಸಿಮೆಂಟ್ ತೊಟ್ಟಿಗಳು, ಬ್ಯಾರೆಲ್‌ಗಳು, ಡ್ರಮ್‌ಗಳು, ಏರ್‌ಕೂಲರ್, ಹೂಕುಂಡದ ನೀರಿನ ಸಂಗ್ರಹಗಳು ಇತ್ಯಾದಿಗಳಲ್ಲಿ ಉತ್ಪತ್ತಿಯಾಗುವುದರಿಂದ ಇವುಗಳನ್ನು ವಾರಕ್ಕೊಮ್ಮೆ ಸಂಪೂರ್ಣವಾಗಿ ಶುಚಿಗೊಳಿಸಿ, ಯಾವಾಗಲೂ ಭದ್ರವಾದ ಮುಚ್ಚಳಿಕೆಯಿಂದ ಮುಚ್ಚಿ ಸೊಳ್ಳೆ ಉತ್ಪತ್ತಿಯಾಗದಂತೆ ಎಚ್ಚರವಹಿಸಿ.
- ಬಯಲಲ್ಲಿ ಟೈರು, ಎಳನೀರಿನ ಚಿಪ್ಪು ಮತ್ತು ತ್ಯಾಜ್ಯ ವಸ್ತುಗಳಲ್ಲಿ ನೀರು ಸಂಗ್ರಹವಾಗದಂತೆ ಸೂಕ್ತ ವಿಲೇವಾರಿ ಮಾಡುವುದು ಅಥವಾ ನಾಶಗೊಳಿಸುವುದು.
- ಈ ರೋಗ ಹರಡುವ ಸೊಳ್ಳೆಗಳು ಹಗಲಲ್ಲಿ ಕಚ್ಚುವುದರಿಂದ ಸೊಳ್ಳೆ ಕಡಿತದಿಂದ ಪಾರಾಗಲು ಮಕ್ಕಳು, ವಿಶ್ರಾಂತಿ ಪಡೆಯುವ ವಯೋವೃದ್ಧರು, ಕಾಯಿಲೆಯಿಂದ ನರಳುವವರು ತಪ್ಪದೇ ಸೊಳ್ಳೆಪರದೆಯನ್ನು ಉಪಯೋಗಿಸುವುದು ಹಾಗೂ ಇತರೆ ಸೊಳ್ಳೆ ನಿರೋಧಕಗಳನ್ನು ಬಳಸುವುದು. ಹೀಗೆ ಮಾಡುವುದರಿಂದ ಈ ರೋಗವನ್ನು ತಡೆಗಟ್ಟುವುದು ಸುಲಭ.

**ನಿಮ್ಮ ಮನೆಯ ಒಳಗೆ ಹಾಗೂ ಮನೆಯ ಸುತ್ತಮುತ್ತ**
**ಸೊಳ್ಳೆ ಉತ್ಪತ್ತಿಯನ್ನು ತಡೆಗಟ್ಟಿ ಡೆಂಗಿ ಜ್ವರ ನಿಯಂತ್ರಿಸಿ**

ಕರ್ನಾಟಕ ವಾರ್ತೆ.

CPMG/KA/BGS-8/2006-08 RNI NO. 45577 / 88
Posted at Basavanagudi : P.O. On the 25th/29th of Every Month
November-2006

# ತೆರೆಮರೆಯಲ್ಲಿ ನಡೆದದ್ದೇನು ?

ಬೆಂಗಳೂರು ಮಹಾನಗರ ಪಾಲಿಕೆಯ ಜೋಗುಪಾಳ್ಯ ವಾರ್ಡಿನ ನಗರಸಭಾಸದಸ್ಯೆ ಬಿ.ಎಂ. ಮಂಗಳಾ ಇತ್ತೀಚೆಗೆ ನಿದ್ರಾ ಗುಳಿಗೆಗಳನ್ನು ತಿಂದು ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿ ವಿಫಲರಾದ ಸುದ್ದಿ ಮೊದಲು ದೂರದರ್ಶನದಲ್ಲಿ ಬಿತ್ತರವಾಯಿತು. ಆಸ್ಪತ್ರೆಯಿಂದ ಚೇತರಿಸಿಕೊಂಡು ಮನೆಗೆ ಬಂದ ಮಂಗಳಾರವರನ್ನು ಮಾಧ್ಯಮದವರು ಸಂದರ್ಶಿಸಿದಾಗ, ತಮಗೆ ಸರಿಯಾಗಿ ಕೆಲಸ ಮಾಡಲು ಅವಕಾಶಕೊಡದೆ ತೊಂದರೆ ಕೊಡುತ್ತಿರುವ ಸಹೋದ್ಯೋಗಿಗಳಿಂದ ಮನನೊಂದಿರುವುದಾಗಿ ಹೇಳಿಕೊಂಡರು. ತಮ್ಮ ಕಾರ್ಯದ ಯಶಸ್ಸನ್ನು ಸಹಿಸಲಾರದ ತಮ್ಮದೇ ಬಿಜೆಪಿ ಪಕ್ಷದ ಶಾಸಕ ರಘು ಅವರ ವರ್ತನೆಯಿಂದ ಬೇಸತ್ತು ತಾವು ಈ ವಿಪರೀತ ಕ್ರಮಕ್ಕೆ ಕೈಹಾಕಬೇಕಾಯಿತು ಎಂದು ವಿವರಣೆ ಕೊಟ್ಟರು. ಆದರೆ ಮಾರನೇ ದಿನದ ಬೆಳಗ್ಗೆಯ ಪತ್ರಿಕೆಗಳು ಬಿತ್ತರಿಸಿದ ಸುದ್ದಿಯೇ ಬೇರೆ. ಅವರ ಆತ್ಮಹತ್ಯೆಗೆ ಸಹೋದ್ಯೋಗಿಗಳು ಕಾರಣವೇ ಅಲ್ಲ - ಎಂಬಂತಹ ಸಂದರ್ಶನವನ್ನು ಪತ್ರಿಕೆಗಳಿಗೆ ಕೊಡಲಾಗಿತ್ತು. ಈ ಒಟ್ಟೂ ಘಟನೆ ನಮಗೆ ಮೇಲ್ನೋಟಕ್ಕೆ ಕಾಣುವಂತೆ ಇಲ್ಲ. ಘಟನೆಯ ಸತ್ಯಾಂಶವನ್ನು ಮುಚ್ಚಿ ಹಾಕಲು ಮಂಗಳಾರವರ ಮೇಲೆ ಹೇರಿರಬಹುದಾದ ಒತ್ತಡವನ್ನು ಯಾರಾದರೂ ಊಹಿಸಬಹುದು !

ಕಳೆದೆರಡು ವರ್ಷಗಳ ಹಿಂದೆ ಆನೇಕಲ್ಲಿನ ಬಿಜೆಪಿಯ ಗ್ರಾಮಪಂಚಾಯಿತಿ ಅಧ್ಯಕ್ಷೆ ಮಂಜುಳಾ ಆದಿಕೇಶವಲು ಅವರ ಘಟನೆಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ರಾಜಕೀಯದಲ್ಲಿ ಮಹಿಳೆಯರ ಕಾರ್ಯಯಶಸ್ಸನ್ನು ಸಹಿಸದ ಪುರುಷರಾಜಕೀಯದ ನೀಚ ಮುಖವಿದು. ಸ್ವತಃ ಜನಪದ ವೈದ್ಯದಲ್ಲಿ ಡಾಕ್ಟರೇಟ್ ಪಡೆದಿರುವ ಮಂಗಳಾರವರು ಈ ದುಷ್ಟ ಶಕ್ತಿಗಳ ವಿರುದ್ಧ ಸೆಣಸಾಡುವುದನ್ನು ಬಿಟ್ಟು ಆತ್ಮಹತ್ಯೆಗೆ ಶರಣಾದದ್ದು ಏಕೆ ? ಎಂಬುದು ಯಕ್ಷ ಪ್ರಶ್ನೆಯಾಗಿಯೇ ಉಳಿಯುತ್ತದೆ.

◆

"Achala" 108, Skyline
Surabhi,
14 - P, Vidyapeeta Road,
BSK III Stage,
Bangalore - 560 085

To :
Smt./Sri